ಪ್ರತಿಭಾ ಗ್ರಂಥಮಾಲೆಯ ಬಿಡಿಮುತ್ತು

# ಮನೆ ತುಂಬಿದ ಬೆಳಕು

( ಕವನ ಸಂಗ್ರಹ )



ಸಿದ್ದಣ್ಣ ಮಸಳಿ



ಪ್ರತಿಭಾ ಗ್ರಂಥಮಾಲೆ ಧಾರವಾಡ.

# ಸಿದ್ದಣ್ಣ ಮಸಳಿ ಮತ್ತು ಅವರ ಕವಿತೆ.

೧೯೫೨ನೆಯ ವರ್ಷದ ಒಂದು ಸಂಜೆ, ಕವಿ ಕಣವಿಯವರ 'ಚೆಂಬೆಳಕಿ' ನಲ್ಲಿ ನಾನು ಅಡಿಯಿರಿಸಿದಾಗ, ಕೆನ್ನೆಗೆ ಕೈಯಾನಿಸಿ ವಿರಾಮ ಕುರ್ಚಿಯಮೇಲೆ ಉದಾಸ ಮುಖಮುದ್ರೆಯಿಂದ ಕುಳಿತಿದ್ದ ಯುವಕರೊಬ್ಬರನ್ನು ಕಂಡೆ. ಅವರ ಕಣ್ಣುಗಳಲ್ಲಿ ಏನೊ ಕಳವಳ. ದೃಷ್ಟಿಯಲ್ಲಿ ಏನೊ ವ್ಯಥೆ.

ಗೋಡೆಯ ಮೇಲೆ ನೇತಾಡುತ್ತಿದ್ದ ಕೀಟ್ಸ್ ಕವಿಯ ಭಾವಚಿತ್ರದತ್ತ ಸಹಜವಾಗಿಯೆ ಹೊರಳಿತು ನನ್ನ ದೃಷ್ಟಿ. ದುಃಖದ ಬೊಂಬೆಯಂತೆ, ತಲೆ ತಗ್ಗಿಸಿ ಕುಳಿತ ಕೀಟ್ಸ್........

ಕುರ್ಚಿಯ ಮೇಲಿನ ಈ ಯುವಕ........

ಸರಿ. ಇವರೂ ಒಬ್ಬರು ಕೀಟ್ಸ್ ಮನೋವೃತ್ತಿಯ ಯುವಕ ಕವಿಯಾಗಿರಬಹುದು........

" ಇವರು ಸಿದ್ದಣ್ಣ ಮಸಳಿ. ಕವಿಗಳು. " ಪರಿಚಯದ ಶಾಸ್ತ್ರ ಪೂರೈಸಿದರು ಕಣವಿ.

" ನನಗಾಗಲೆ ಅನ್ನಿಸಿತ್ತು. ಇವರು ಶೋಕಗೀತೆಗಳನ್ನೇ ಹೆಚ್ಚಾಗಿ ಬರೆಯುವರೋ ಏನು ? " ನಾನು ಚೇಷ್ಟೆಯ ಧ್ವನಿಯಲ್ಲಿ ಕೇಳಿದೆ.

ಕಣವಿ ನಕ್ಕರು. ನಾನೂ ನಕ್ಕೆ.

ಸಿದ್ದಣ್ಣ ಮಸಳಿ ಮಾತ್ರ ನಗಲಿಲ್ಲ. ಅವರ ಮುಖದ ಮೇಲಿನ ಒಂದು ಗೆರೆಯೂ ಅಲುಗಾಡಲಿಲ್ಲ. ಚಿತ್ರದಲ್ಲಿನ ಆಕೃತಿಯಂತೆಯೇ ನಿಶ್ಚಲವಾಗಿ ಕುಳಿತಿದ್ದರವರು.

ಕವಿಗಳೆಂದರೆ ನನಗೆ ವಿಶೇಷವಾದ ಪ್ರೀತಿ, ಅಕ್ಕರತೆ, ಆತ್ಮೀಯತೆ. ಕನ್ನಡ ಕಾವ್ಯರಂಗದಲ್ಲಿ ಪ್ರಭಾವಶಾಲಿ ಕವಿಯೊಬ್ಬ ಹೊಸದಾಗಿ ಕಾಣಿಸಿಕೊಂಡಾಗಲೆಲ್ಲ ನನ್ನ ಹೃದಯ ಹಿಗ್ಗುತ್ತದೆ.

" ಎಲ್ಲಿ, ಸಿದ್ದಣ್ಣನವರೆ, ನಿಮ್ಮ ಕವಿತೆ ತೆಗೆಯಿರಿ. ಕೇಳೋಣ. "

" ನಾನೇನೂ ಹೆಚ್ಚಾಗಿ ಬರೆದಿಲ್ಲ. " ಎಂದರು ಸಿದ್ದಣ್ಣ.

" ಹೆಚ್ಚಾಗಿ ಬರೆಯದಿದ್ದರೇನಾಯ್ತು ? ಒಂದೆರಡೇ ಬರೆದರೂ ಅವು ಚೆನ್ನಾಗಿದ್ದರಾಯಿತು. ಗ್ರೇ ಗೊತ್ತಲ್ಲ ನಿಮಗೆ. ಅವನೂ ಹೆಚ್ಚು ಕವಿತೆ ಬರೆದಿಲ್ಲ. ಆದರೂ ಆತ ಅಮರ."

ಹಾಗೆ ಆ ಮಾತು ಈ ಮಾತು ಆಡಿ, ಸಿದ್ದಣ್ಣನವರ ಗಾಂಭೀರ್ಯದ ಕೋಟೆಯನ್ನೊಡೆದು ಅವರನ್ನು ಕಾವ್ಯ ವಾಚನಕ್ಕೆ ತೊಡಗಿಸಿದುದಾಯಿತು.

........ಕೊಠಡಿಯ ಹೊರಗಡೆ ತೆಂಗಿನ ಗರಿ ಗಾಳಿಗೆ ತೂಗುತ್ತಿದ್ದುವು ಹಾಗೆ ಹೀಗೆ. ಸೂರ್ಯಾಸ್ತವಾದುದಕ್ಕೆ ಬಹಳ ಹೊತ್ತಾಗಿ ಹೋಗಿತ್ತು. ಬಾನಿನಲ್ಲಿ ಏರಿ ಬರುತ್ತಿದ್ದ ಅರ್ಧ ಚಂದ್ರನ ಮಂದ ಪ್ರಕಾಶ ಉದ್ಯಾನದ ಹೂಗಿಡ ಬಳ್ಳಿಗಳ ಮೇಲೆ ಆಟವಾಡುತ್ತಿತ್ತು. ಎದುರು ಮನೆಯ ರೇಡಿಯೋವಿನಲ್ಲಿ ಪಿಟೀಲಿನ ರಾಗಾಲಾಪನೆಗಾರಂಭವಾಗಿತ್ತು.

ಕವಿತೆಯ ಪುಸ್ತಕವನ್ನು ಕೈಯಲ್ಲಿ ಹಿಡಿದು ಒಂದು ಗಳಿಗೆ ಹಾಗೇ ಕಣ್ಣು ಮುಚ್ಚಿ ಕುಳಿತಿದ್ದರು ಸಿದ್ದಣ್ಣ.

ಪಿಟೀಲಿನ ರಾಗ ಹಠಾತ್ತಾಗಿ ಏರಿ ರಭಸದಿಂದ ಅಲೆದು ನಿಧಾನವಾಗಿ ಇಳಿದು ಪ್ರಶಾಂತವಾಗಿ ಹರಿದು ಬರತೊಡಗಿತು.

ಅದರೊಡನೆಯೇ ಸಿದ್ದಣ್ಣನವರ ಕಾವ್ಯಗಂಗೆ ಪ್ರವಹಿಸತೊಡಗಿತು.

" ಗಳಿಗೆ ಗಳಿಗೆಗೂ ಎದೆಯ ಕಡಲಿನಲಿ
ಅಳಲ ತೆರೆಗಳೆದ್ದು,
ದಡಕೆ ಅಪ್ಪಳಿಸಿ ಮನವ ಕಲಕುತಿವೆ
ಕಳೆದ ನೆನಹು ತಂದು........"

ಸರಿ. ಅದೇ ಕಳವಳ, ಅದೇ ವ್ಯಥೆ, ಅದೇ ವಿಷಣ್ಣತೆ.
ಗ್ರೇ ನೆನಪು. ಕ್ರೀಟ್ಸ್ ನೆನಪು. ಷೆಲ್ಲಿಯ ನೆನಪು.

" ಹಗಲು ಮನಸಿನಲಿ ಇರುಳು ಕನಸಿನಲಿ
ಚಿತ್ರ ನೂರು ನೂರು
ಮುಗಿಲ ತೇರಿನಲಿ ತೇಲಿ ಬಂದಿರಲು
ಕಣ್ಣು ತುಂಬ ನೀರು........ "

ಓದುತ್ತಿದ್ದ ಕವಿ ತಡೆದು ನಿಂತರು.

ಮತ್ತೆ ಕೊಠಡಿಯಲ್ಲಿ ಗಂಭೀರ ಮೌನ. ವಿಲಕ್ಷಣ ನೀರವತೆ.

ನಾನು ಚಕಿತನಾಗಿ ಸಿದ್ದಣ್ಣನವರನ್ನೇ ದಿಟ್ಟಿಸುತ್ತಿದ್ದೆ. ಅವರು ಭಾವೋದ್ರಿಕ್ತರಾಗಿ ಮೈಮರೆತಿದ್ದರು.

ಆ ಕವಿತೆಯನ್ನು ಬರೆಯುತ್ತಿದ್ದಾಗಲೂ ಹಾಗೇ ಆಗಿರಬಹುದು ಅವರಿಗೆ. ಓದುತ್ತಿದ್ದಾಗಲೂ ಹಾಗೇ ಆಗಿತ್ತು.

ಕವಿ-ಕವಿತೆಗಳ ಆ ಅಪೂರ್ವ ಸಂಗಮವನ್ನು ಕಂಡು ನಾನು ಬೆರಗುಗೊಂಡೆ.

*　　　　*

ಮತ್ತೆ ಕವಿತೆಯನ್ನೋದಲು ನಾವು ಅವರಿಗೆ ಒತ್ತಾಯ ಮಾಡಲಿಲ್ಲ.

ನಾನೊಂದು ಸಿಗರೇಟು ಹೊತ್ತಿಸಿದೆ. ಕಣವಿಯವರೂ ಒಂದನ್ನು ಹೊತ್ತಿಸಿದರು. ನಾನು ಮುಂದೆ ನೀಡಿದ ಸಿಗರೇಟನ್ನು ಸಿದ್ದಣ್ಣ ಸ್ವೀಕರಿಸಲಿಲ್ಲ.

"ಅವರು ಸೇದುವದಿಲ್ಲ" ಎಂದರು ಕಣವಿ.

"ಸಿಗರೇಟಿನ ಹೊಗೆಯಲ್ಲಿ ದುಃಖದ ಕಡಲನ್ನೂ ಒಣಗಿಸಬಲ್ಲ ಶಕ್ತಿಯುಂಟು!" ಎಂದೆ ನಾನು.

ಕಣವಿ ನಕ್ಕರು.

ಸಿದ್ದಣ್ಣ ನಗಲಿಲ್ಲ.

ನಾವು ಹರಟತೊಡಗಿದೆವು.

ಅಂಥದೊಂದು ಹೃದಯದ್ರಾವಕ ಕವಿತೆ ಬರೆಯಬಲ್ಲ ಸಿದ್ದಣ್ಣನವರ ಬಗೆಗೆ ನನಗೆ ಕುತೂಹಲ. ಅವರು ಎಲ್ಲಿಯವರು? ಎಲ್ಲಿ ಓದಿದರು? ಏನು ಮಾಡುತ್ತಿದ್ದಾರೆ? ಇನ್ನೂ ಏನೇನನ್ನು ಬರೆದಿದ್ದಾರೆ? ನಾನಂತೂ ಅವರ ಹೆಸರು ಕೇಳುತ್ತಿದ್ದುದು ಅದೇ ಮೊದಲ ಬಾರಿ. ಅವರನ್ನು ನೋಡುತ್ತಿದ್ದುದೂ ಅದೇ ಮೊದಲ ಬಾರಿ. ಅವರ ಕವಿತೆಯನ್ನು ಕೇಳಿದ್ದುದೂ ಅದೇ ಮೊದಲ ಬಾರಿ.

"ಎಂಥ ಸುಂದರ ಕವಿತೆ ಬರೆದಿದ್ದಾರಲ್ಲ! ಇದು ವರೆಗೆ ನಾವು ಇವರ ಹೆಸರನ್ನೂ ಕೇಳದಿರುವದು ಆಶ್ಚರ್ಯ ಅಲ್ಲವೆ?"—ನಾನು.

" ಪತ್ರಿಕೆಗಳಲ್ಲಿ ಪ್ರಕಟವಾದರೆ ತಾನೆ ನಮಗೆ ಹೆಸರು ಗೊತ್ತಾಗುವದು ! ಸಿದ್ಧಣ್ಣ ವಿಜಾಪುರ ಜಿಲ್ಲೆಯವರು. ಕವಿತೆಗಳನ್ನು ಪ್ರಕಟಿಸಿ ಯುವಕ ಕವಿಗಳನ್ನು ಬೆಳಕಿಗೆ ತರುವ ಪತ್ರಿಕೆಗಳೂ ಇಲ್ಲವಲ್ಲ ಆ ಜಿಲ್ಲೆಯಲ್ಲಿ ! "—ಕಣವಿ.

" ಬಹಳ ಕಷ್ಟಪಟ್ಟಿರಬೇಕು. "

" ಹೌದು. ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಸುಖ ಅನ್ನುವದನ್ನೇ ಕಂಡಿಲ್ಲವಂತೆ. ಮನೆಯಲ್ಲಿ ಬಹಳ ಬಡತನ. ನೇಕಾರ ಕುಟುಂಬ. ಉಪವಾಸ ವನವಾಸ ಸಹಿಸಿ ಬಿ. ಎ. ಮುಗಿಸಿದರು. ಈಗ ಒಂದು ಕಡೆ ಕೆಲಸದಲ್ಲಿದ್ದಾರೆ. ಅದರಲ್ಲೂ ಅವರಿಗೆ ತೃಪ್ತಿಯಿಲ್ಲ. ಅವರ ಉದಾಸೀನತೆಗೆ ಕಾರಣ ಅದೇ. "

ಅಷ್ಟು ಹೇಳಿ ಮಾತು ನಿಲ್ಲಿಸಿದರು ಕಣವಿ. ನಾನೂ ಮತ್ತೆ ಮಾತನಾಡಲಿಲ್ಲ. ನೇಕಾರ ಕುಟುಂಬದಲ್ಲಿ ಜನಿಸಿ ಕವಿಯಾಗಿ ಬೆಳೆದು ನರಳಿ ನರಳಿ ಸಾವಿಗೀಡಾದ ಶಿವೇಶ್ವರ ದೊಡ್ಡಮನಿಯ ಜ್ಞಾಪಕ ಬಂತು. ಅವರಂತೆಯೇ ಕೊರಗಿ ಕಾಲವಾದ ಕಾಖ್ಯಹಳ್ಳ ರಾಮಕೃಷ್ಣ ಸೆಟ್ಟಿ........ಸಂಸ........

ಸಿದ್ಧಣ್ಣನವರನ್ನು ಹಾಗೆ ಕೊರಗಲು ಬಿಡಬಾರದೆಂದು ನಾನು ಮನಸ್ಸಿನಲ್ಲೇ ನಿರ್ಧರಿಸಿದೆ. ಅವರ ಉದಾಸೀನತೆಯನ್ನು ಹೋಗಲಾಡಿಸಬೇಕು. ಅವರನ್ನು ಆಶಾವಾದಿಯನ್ನಾಗಿಸಬೇಕು........

* * *

ಸಿದ್ಧಣ್ಣ ಧಾರವಾಡದಲ್ಲಿಯೆ ನೆಲೆಸಿದರು.

ಆರ್. ಎಲ್. ಎಸ್. ಹೈಸ್ಕೂಲಿನಲ್ಲಿ ಕೆಲಸ. 'ಚೆಂಬೆಳಕಿ' ನಲ್ಲಿ ವಾಸ. ಕವಿ ಕಣವಿಯವರ ನಿಕಟ ಸಹವಾಸ.

ಅವರ ಮನಸ್ಸನ್ನು ಮುತ್ತಿಕೊಂಡಿದ್ದ ವಿಷಣ್ಣತೆಯ ಮಂಜು ಧಾರವಾಡದ ಮಂತ್ರಯುಕ್ತ ವಾತಾವರಣದ ಬಿಸಿಗೆ ಕರಗಿ ಹೋಗತೊಡಗಿತು. ಕವಿಗಳು ಬೆಳೆಯಲು ತಕ್ಕ ಅನುಕೂಲತೆಗಳನ್ನುಳ್ಳ ನಗರ ಧಾರವಾಡ. ಕನ್ನಡ ನಾಡಿಗೆ 'ಅಂಬಿಕಾತನಯದತ್ತ' ರೆಂಬ ಅಮರ ಕವಿಯನ್ನಿತ್ತ ನಗರವಲ್ಲವೇ ಧಾರವಾಡ ? ' ವಿನಾಯಕ ' ರ ಪ್ರತಿಭೆ ವಿಕಸಿತವಾದುದು ಧಾರವಾಡದಲ್ಲಿ.

ಕಣವಿಯವರ ಕಾವ್ಯಕನ್ನಿಕೆ ದೊಡ್ಡವಳಾದುದು ಧಾರವಾಡದಲ್ಲಿ. ಪಾಂಡೇಶ್ವರ, ವಿ. ಜಿ. ಭಟ್ಟ, ಚಿತ್ತಾಲ, ಚಿದಂಬರ ದೀಕ್ಷಿತರ ಕಾವ್ಯೋಪಾಸನೆ ರಭಸದಿಂದ ನಡೆದುದು ಧಾರವಾಡದಲ್ಲಿ.

" ಧಾರವಾಡದ ನೆಲದ ಗುಣವೇನೊ ಋಣವೇನೊ
ಕವಿಗಾಳಿ ಸವಿಗಾಳಿ ತೀಡುತಿಹುದು........"

ಸಿದ್ದಣ್ಣನವರ ಮನಸ್ಸಿಗೂ ಆರೋಗ್ಯವನ್ನೆರೆಯಿತು ಈ ಸವಿಗಾಳಿ. 'ಅಂಬಿಕಾತನಯ ದತ್ತ'ರ ಹಾಗೆ, ಕಣವಿಯವರ ಹಾಗೆ ಸಿದ್ದಣ್ಣನವರೂ ಧಾರವಾಡದ ತಾಯಿ ಮಡಿಲಲ್ಲಿ ಮೊರೆಯಿಟ್ಟರು.

" ಬಂದಿರುವೆನಿದೊ ಮಾಯಿ ಧಾರವಾಡದ ತಾಯಿ
ಸರ್ವಮಂಗಳೆ ನಿನ್ನ ಭಾಗ್ಯದುಡಿಗೆ;
ಜನುಮ ಜನುಮದ ಬಯಕೆ ತುಂಬಿನಿಂದಿಹುದಿಂದು
ಕನಸಿನಲಿ ಕಂಡ ದಿನ ಬಂತು ಕೊನೆಗೆ. "

ಧಾರವಾಡದ ತಾಯ ಕಣ್ಣಂಚಿನಲ್ಲಿ 'ಮಿಂಚು ಹೊಳೆಯುತಲಿರಲು', 'ಕವಿದು ಎದೆವನೆಯಲ್ಲಿ ಬೆಳಕೆ ಬೆಳಕಾಯಿತು'. ನೈರಾಶ್ಯ ವಾದವನ್ನು ಕೊಡಹಿ ಪ್ರಫುಲ್ಲ ಚಿತ್ತರಾಗಿ ಅವರು ಹೊಸ ಉತ್ಸಾಹದಿಂದ ಕವಿತೆ ಬರೆಯತೊಡಗಿದರು. ದುಃಖ, ಕಳವಳ, ಅತೃಪ್ತಿ ತೊಲಗಿದುವು. ಸಿದ್ದಣ್ಣ ಹೊಸ ವ್ಯಕ್ತಿಯಾದರು. ಕನ್ನಡದ ಪ್ರಖ್ಯಾತ ಪತ್ರಿಕೆಗಳಲ್ಲಿ ಅವರ ಕವಿತೆಗಳೂ ಕಾಣಿಸಿಕೊಳ್ಳತೊಡಗಿದುವು.

ಎರಡೇ ಎರಡು ವರ್ಷಗಳಲ್ಲಿ ಸಿದ್ದಣ್ಣನವರನ್ನು ಹಿಂಬಾಲಿಸಿ ಬಂತು ಕೀರ್ತಿ. ಗೆ. ರಾಮಚಂದ್ರಶರ್ಮರೊಬ್ಬರನ್ನು ಹೊರತುಪಡಿಸಿದರೆ ಸಿದ್ದಣ್ಣನವರಷ್ಟು ಬೇಗ ಖ್ಯಾತನಾಮರಾದ ಇನ್ನೊಬ್ಬ ಕನ್ನಡ ಕವಿ ಸಿಕ್ಕುವುದಿಲ್ಲ. ರೋಮಾಂಟಿಕ್ ಮಾರ್ಗ ಮತ್ತು ನವ್ಯ ಮಾರ್ಗಗಳೆರಡರಲ್ಲೂ ನಡೆದು ಹಲವು ಉತ್ತಮ ಕವಿತೆಗಳನ್ನೇ ರಚಿಸಿ ಕಾವ್ಯ ಪ್ರೇಮಿಗಳ ಹೃದಯ ಸೂರೆಗೊಂಡವರು ಸಿದ್ದಣ್ಣ.

ಕವಿತೆಗಳೆಲ್ಲ ಒಂದುಗೂಡಿದ ಸಂಕಲನ: 'ಮನೆ ತುಂಬಿದ ಬೆಳಕು.'

*  *  *

ಇಂದಿನದು ಕಾದಂಬರೀ ಯುಗವೆಂದು ಹೇಳಲಾಗುತ್ತದೆ. ನನಗೇನೂ ಹಾಗೆನ್ನಿಸುವುದಿಲ್ಲ. ಇದು ಕನ್ನಡ ಸಾಹಿತ್ಯದ ಸುಗ್ಗಿಯ ಕಾಲವೆಂದು ನಾನು ಹೇಳುತ್ತೇನೆ.

ಅರ್ಥಾತ್—ಓದುಗರಿಗೆ ಕಾದಂಬರಿಗಳೆಂದರೆ ವಿಶೇಷ ಮೆಚ್ಚುಗೆ. ಎಲ್ಲ ದೇಶಗಳಲ್ಲೂ ಹಾಗೆಯೇ ಅಲ್ಲವೆ ? ಈಚೆಗೆ ನಮ್ಮಲ್ಲಿ ಪುಸ್ತಕಗಳ ಬೆಲೆ ಇಳಿದಂದಿನಿಂದ ಕಾದಂಬರಿಗಳ ಮೊದಲ ಮುದ್ರಣದ ಐದಾರು ಸಾವಿರ ಪ್ರತಿಗಳು ಒಂದೆರಡು ತಿಂಗಳುಗಳಲ್ಲೇ ಮಾರಿ ಹೋಗುತ್ತಿವೆ. ಬೆಲೆಯಿಳಿಯುವುದಕ್ಕೆ ಮೊದಲೇ ಕಾದಂಬರೀ ರಚನೆಯಲ್ಲಿ ನಿರತರಾಗಿದ್ದ ಲೇಖಕರು ಮಾತ್ರವಲ್ಲ, ಬರೆಯಬಲ್ಲವರೆಲ್ಲರೂ ಇಂದು ಕಾದಂಬರಿಗಳನ್ನೇ ಬರೆಯಲು ಆತುರರಾಗಿರುವುದನ್ನು ಕಾಣುತ್ತಿದ್ದೇವೆ. ಈ ಅಸಹಜ ಆತುರದಲ್ಲಿ ಕವಿತೆ, ಕಥೆ, ನಾಟಕ, ಹರಟೆ, ಚರಿತ್ರೆ, ಪ್ರಬಂಧ ಮೊದಲಾದುವೆಲ್ಲಾ ಹಿಂದುಳಿದಿವೆ. ಕಥಾಸಂಕಲನಗಳಿಗೂ ಪ್ರಕಾಶಕರು ದೊರೆಯುವುದೂ ಕಷ್ಟಕರವಾಗಿದೆ. ವಸ್ತುಸ್ಥಿತಿ ಹೀಗಿದ್ದರೂ, ನನ್ನ ಗೆಳೆಯರೂ ಕವಿಕಾವ್ಯ ಪಕ್ಷಪಾತಿಗಳೂ ಆದ ಶ್ರೀ ಭಾಲಚಂದ್ರ ಘಾಣೇಕರರು ಸಿದ್ದಣ್ಣನವರ ಈ ಪ್ರಥಮ ಕವನ ಸಂಕಲನವನ್ನು ಪ್ರಕಟಿಸಲು ಮುಂದೆ ಬಂದುದು ಮೆಚ್ಚಿಕೊಳ್ಳತಕ್ಕ ಸಂಗತಿಯಾಗಿದೆ.

ಕವನ ಸಂಕಲನಗಳಿಗೆ ಗಿರಾಕಿ ದೊರೆಯುವುದಿಲ್ಲವೆಂದು ಕೆಲವರು ಆಡುವ ಮಾತು ಪೂರ್ಣ ಸತ್ಯವಲ್ಲ. ಕಾದಂಬರಿಗಳ ಹಾರಾಟ ವಿಶೇಷವಾಗಿರುವ ಈ ಕಾಲದಲ್ಲೂ '**ಶ್ರೀರಾಮಾಯಣ ದರ್ಶನಂ**' ದಂಥ ಭಾರಿ ಬೆಲೆಯ ಮಹಾ ಕಾವ್ಯವನ್ನೂ ಜನ ಕೊಳ್ಳುತ್ತಲೇ ಇದ್ದಾರೆ. ತನ್ನ ಪ್ರತಿಭೆಯಿಂದಲೂ ಕಲ್ಪನಾವಿಲಾಸದಿಂದಲೂ ವಾಚಕರ ಮನಸ್ಸನ್ನು ಸೂರೆಗೊಂಡ ಕವಿಯ ಕವನ ಸಂಕಲನಗಳಿಗೆ ಯಾವಾಗಲೂ ಉತ್ಸಾಹದ ಸ್ವಾಗತ ಲಭಿಸುತ್ತದೆ. ಅದು ಆ ಕವಿಯ ಪ್ರಥಮ ಸಂಕಲನವಾಗಿದ್ದರೂ ಪರವಿಲ್ಲ. ಅಡಿಗರ 'ಭಾವತರಂಗ' ಕಣವಿಯವರ 'ಭಾವಜೀವಿ', ರಾಮಚಂದ್ರಶರ್ಮರ 'ಹೃದಯಗೀತೆ', ಬಿಳಿಗಿರಿಯವರ 'ನಂದನ', ಕೊಟ್ರೇಲಗಿಯವರ 'ಪಿಪಾಸೆ', ಪಾ. ವೆಂ. ಆಚಾರ್ಯರ 'ನವನೀರದ' ವಿ. ಜಿ. ಭಟ್ಟರ 'ರಕ್ತಾಂಜಲಿ' ಜಿ. ಎಸ್. ಶಿವರುದ್ರಪ್ಪನವರ 'ಸಾಮಗಾನ, ಯಕ್ಕುಂಡಿಯವರ 'ಸಂತಾನ' ಇವು ಬಂದಾಗ ಕಾವ್ಯಪ್ರೇಮಿ ಕನ್ನಡಿಗರು ಅವುಗಳನ್ನು ಆದರದಿಂದ ಬರಮಾಡಿಕೊಂಡಿದ್ದಾರೆ. ಒಂದು

ಕವನಸಂಕಲನವ ಸಾವಿರ ಪ್ರತಿಗಳು ಮಾರಾಟವಾಗಲು ಇಪ್ಪತ್ತು ವರ್ಷ ಕಾಯಬೇಕಾದ ಪರಿಸ್ಥಿತಿಯಿಂದು ಇಲ್ಲ. 'ಭಾವತರಂಗ' ದ ಎರಡನೆಯ ಮುದ್ರಣ ಬಂದಿದೆ. 'ಭಾವಜೀವಿ' ಮತ್ತೆ ಅಚ್ಚಿನ ಮನೆಯನ್ನು ಪ್ರವೇಶಿಸ ಬೇಕಾಗಿದೆ. ಕನ್ನಡದಲ್ಲಿ ಕೊಂಡು ಓದುವ ವಾಚಕರ ಸಂಖ್ಯೆ ಬೆಳೆದಿದೆ. ಕವನ ಸಂಕಲನಗಳನ್ನು ಕೊಂಡು ಸಂಗ್ರಹಿಸುವ ರಸಿಕರ ಸಂಖ್ಯೆಯೂ ಹೆಚ್ಚಿದೆ. ಸಿದ್ದಣ್ಣನವರ ಈ ಪ್ರಥಮ ಸಂಕಲನವನ್ನು ಕನ್ನಡ ಕಾವ್ಯಪ್ರೇಮಿಗಳು ಪ್ರೀತಿ ಯಿಂದ ಸ್ವಾಗತಿಸುವರೆಂಬ ವಿಶ್ವಾಸ ನನಗಿದೆ.

*　　　　　　　*

ವಯಸ್ಸಿನ ಹದಿನೈದನೆಯ ವರ್ಷದಲ್ಲೇ ಕಾವ್ಯಾರಾಧನೆಗಾರಂಭಿಸಿದ ಸಿದ್ದಣ್ಣನವರು ಈಗಾಗಲೆ ಸಾಕಷ್ಟು ಅನುಭವ ಪಡೆದಿದ್ದಾರೆ. ಆ ಅನುಭವ ದಿಂದಾಗಿ ಅವರ ಕವಿತೆ ಪ್ರೌಢವಾಗಿದೆ. ಪೂರ್ವ ಯೌವನದ ಎಳಸು ಮಾಯ ವಾಗಿ ಪೂರ್ಣ ಯೌವನದ ಸೊಗಸು ಅವರ ಕವಿತೆಯನ್ನಾವರಿಸಿಕೊಂಡಿದೆ. ಈ ಸೊಗಸನ್ನೂ ಸೌಂದರ್ಯವನ್ನೂ ಈ ಕವನಸಂಕಲನದುದ್ದಕ್ಕೂ ಕಾಣ ಬಹುದು. ಇಲ್ಲಿ ಭಾವಗೀತೆಗಳಿವೆ. 'ನವ್ಯ' ಕವಿತೆಗಳೂ ಇವೆ. ಈ ಎಲ್ಲ ಕವಿತೆಗಳ ವಿಶಿಷ್ಟ ಗುಣವಾದ ಸರಳತೆಯೇ ನನ್ನ ಮನಸ್ಸನ್ನು ಹೆಚ್ಚಾಗಿ ಸೆಳೆದು ಕೊಂಡಿರುವುದು. ಸರ್ವ ಸಾಮಾನ್ಯ ವಾಚಕರಿಗೂ ಸುಲಭವಾಗಿ ಅರ್ಥವಾ ಗುವಂತಿರುವ ಈ ಕವಿತೆಗಳ ಬಂಧವೇ ಒಂದು ದೊಡ್ಡ ಗುಣವೆಂದು ನನ್ನ ಅಭಿ ಪ್ರಾಯ. ಜನರಿಗೆ ಅರ್ಥವಾಗದಂಥ ಕ್ಲಿಷ್ಟವಾದ (**high brow**) ಕವಿತೆಗಳಲ್ಲ ಇವು. ಯಾರಾದರೂ ಓದಿ ಇವುಗಳ ಸ್ವಾರಸ್ಯವನ್ನು ಸವಿದು ಸುಖಿಸಬಹು ದಾಗಿದೆ.

ಈ ಕವಿತೆ ಸರಳವಾಗಿದ್ದಷ್ಟೂ ಅದರ ಸೌಂದರ್ಯ ಹೆಚ್ಚುವುದೆಂದು ನನ್ನ ಅಭಿಪ್ರಾಯ. ನಾಲ್ಕು ಜನ 'ಪಂಡಿತರು' ಮಾತ್ರ ಓದಲು ತಯಾರಿಸಿದ 'ತಿಲಕಾಷ್ಠಮಹಿಷ ಬಂಧನ' ವಲ್ಲ ಕವಿತೆ. ಕವಿಯ ಹೃದಯದಲ್ಲಿ ಜನಿಸಿ ಕಾಗದದಲ್ಲಿ ಮೂಡಿ ಬಂದು ಕಾವ್ಯಪ್ರೇಮಿಗಳ ಹೃದಯವನ್ನು ಸೂರೆಗೊಳ್ಳಬಲ್ಲ ಸಾಮರ್ಥ್ಯ ಪಡೆದ ಕವಿತೆಯೇ ನಿಜವಾದ ಕವಿತೆ. 'ರೋಮಾಂಟಿಕ್ ಕವಿತೆ' 'ನವ್ಯ ಕವಿತೆ' ಎಂಬ ಭೇದಭಾವವಿದ್ದರೂ ಅದು ಕೇವಲ ಹೆಸರಿನ ಮಾತು,

ಘೋಷಣೆಯ ಮಾತು, ಫ್ಯಾಷನ್ನಿನ ಮಾತು. ಕವಿತೆ 'ಹೊಸ' ಮಾರ್ಗದ್ದೇ ಆಗಲಿ, 'ಹಳೆಯ' ಮಾರ್ಗದ್ದೇ ಆಗಲಿ, **ಮೊದಲನೆಯದಾಗಿ ಅದು ಕವಿತೆಯಾಗಿರಬೇಕಾದುದು** ಮಹತ್ವದ ವಿಷಯ. ಕವಿತೆಯಲ್ಲಿ ನಾವು ನೋಡುವುದು ಕಾವ್ಯಾಂಶವನ್ನೇ; 'ನವ್ಯ' 'ಭವ್ಯ' ಎಂಬ ವಿಶೇಷಣಗಳನ್ನಲ್ಲ. ಎಲಿಯಟ್, ಆಡೆನ್, ಡೈಲಾನ್ ಥಾಮಸ್ ಮೊದಲಾದ ಆಂಗ್ಲ ಕವಿಗಳ ಅಂಧಾನುಕರಣೆಯಿಂದಲೂ ಅಷ್ಟು ಪದ್ಯ ಬಂದೀತು. ತನ್ನ ಹೊಸತನದಿಂದಲೂ ಬೆಡಗಿನಿಂದಲೂ ಥಳಕಿನಿಂದಲೂ ನಾಲ್ಕು ದಿನ ನಾಲ್ಕು ಜನರನ್ನು ಅದು ಬೆರಗುಗೊಳಿಸೀತು. ಆದರೆ ಅದು **ನಮ್ಮ ಕವಿತೆ**ಯೆನ್ನಿಸಿಕೊಳ್ಳಲಾರದು. ಕನ್ನಡದ ನೆಲದ ಮೇಲೆ ಕಾಲೂರಿ ನಿಲ್ಲಲಾರದು. ಕನ್ನಡದ ಸಾಹಿತ್ಯದಲ್ಲಿ ಸ್ಥಾನ ಪಡೆಯಲಾರದು.

ಹೊಸಗನ್ನಡ ಸಾಹಿತ್ಯದ ಮುನ್ನಡೆಯಲ್ಲಿ ಒಂದು ಘಟ್ಟ ಕಳೆದು ಈಗ ಎರಡನೆಯ ಘಟ್ಟ ಮೊದಲಾಗಿದೆಯೆಂಬ ಮಾತಿನಲ್ಲಿ ಮಾತ್ರ ಭಿನ್ನಾಭಿಪ್ರಾಯವಿರಲಾರದು. ಗದ್ಯ ಮತ್ತು ಪದ್ಯ ಎರಡಕ್ಕೂ ಅನ್ವಯಿಸುವ ಮಾತು ಇದು. ಕನ್ನಡಕ್ಕೆ ಆಧುನಿಕತೆ ಬಂದದ್ದು ಇಂಗ್ಲಿಷ್ ಸಾಹಿತ್ಯದ ಸಂಪರ್ಕದಿಂದ. ಸಣ್ಣ ಕಥೆ, ಕವಿತೆ, ಕಾದಂಬರಿ, ಹರಟೆ ಮೊದಲಾದ ಸಾಹಿತ್ಯ ಪ್ರಕಾರಗಳ ನವನವೀನ ತಂತ್ರಗಳನ್ನು ನಾವು ತಿಳಿದುಕೊಂಡದ್ದು ಪಾಶ್ಚಾತ್ಯ ಸಾಹಿತ್ಯಗಳ ವ್ಯಾಸಂಗದಿಂದ. ಕಲೆಯ ತಂತ್ರಗಳನ್ನು ಕಲಿತುಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಆ ತಂತ್ರಗಳನ್ನು ನಮ್ಮ ಸಾಹಿತ್ಯದಲ್ಲಿ ಬಳಸಿಕೊಳ್ಳುವ ಮುನ್ನ ಗಾಢವಾಗಿ ಯೋಚಿಸಬೇಕಾದುದು ಆವಶ್ಯಕ. ಇಂಗ್ಲೆಂಡ್, ಅಮೆರಿಕಾ, ಫ್ರಾನ್ಸ್, ರಶಿಯಾಗಳ ಜನಜೀವನದ ಮಟ್ಟಕ್ಕೂ ನಮ್ಮ ಜನಜೀವನದ ಮಟ್ಟಕ್ಕೂ ಇರುವ ಮಹದಂತರವನ್ನು ನಾವು ಮರೆಯಕೂಡದು. ಡೈಲಾನ್ ಥಾಮಸ್ ಕವಿತೆಯನ್ನು ಇಂಗ್ಲೆಂಡಿನಲ್ಲಿ ನಾಲ್ಕು ಸಾವಿರ ಜನರಾದರೂ ಓದಿ ಅರ್ಥ ಮಾಡಿಕೊಂಡಾರು; ಕರ್ನಾಟಕದಲ್ಲಿ ಮಾತ್ರ ನಾಲ್ಕು ಜನರಿಗೂ ಅದು ಸರಿಯಾಗಿ ಅರ್ಥವಾಗಲಾರದು. ಅಂತೆಯೇ ಪಾಶ್ಚಾತ್ಯ ಕವಿಗಳ ಅಂಧಾನುಕರಣೆ ನಿಷ್ಪ್ರಯೋಜಕ. ಹೊಸ ಹೊಸ ಪ್ರಯೋಗಗಳು ನಡೆಯಲಿ ನಮ್ಮ ಕವಿತೆಯಲ್ಲೂ. ಆದರೆ ಆ ಪ್ರಯೋಗಗಳನ್ನೂ ಜನರು ಅರ್ಥ ಮಾಡಿಕೊಳ್ಳಬೇಕಾದ್ದು ಮುಖ್ಯವಲ್ಲವೆ? ಕತೆಗಾರರು, ಕಾದಂಬರಿಕಾರರು, ಕವಿಗಳು,

ಎಲ್ಲರೂ ಬರೆಯುವುದು ಜನರಿಗಾಗಿ, ಜನರಿಗೆ ಆನಂದವನ್ನೊದಗಿಸುವದಕ್ಕಾಗಿ. ಅರ್ಥವಾಗದಂಥ ಬರೆಹಗಳಿಂದ ಜನರಿಗೆ ಆನಂದಗೊಳಿಸುವುದಾದರೂ ಹೇಗೆ ? ಅಂಥ ಕ್ಲಿಷ್ಟ ಕೃತಿಗಳನ್ನು ರಚಿಸುವುದರಿಂದ ಲೇಖಕರಿಗಾದರೂ ಏನು ಪ್ರಯೋಜನ? ಸಾಹಿತ್ಯಕ್ಕಾದರೂ ಏನು ಲಾಭ?

ಪಾಶ್ಚಾತ್ಯ ನವ್ಯಕಾವ್ಯದ ಅಂಥ ಆರಾಧಕರಾಗದೆ, ನಮ್ಮ ಸಿದ್ದಣ್ಣನವರು ಕನ್ನಡದ ಸೌವರ್ಣ ಮಧ್ಯಮಾರ್ಗದಲ್ಲೇ ಹೊರಟು ಸರಳವಾದ ಭಾಷೆಯನ್ನೇ ಉಪಯೋಗಿಸಿ, ಹೊಸ ಬಗೆಯ ಹಲವು ಕವಿತೆಗಳನ್ನು ರಚಿಸಿರುವುದು ಸಂತೋಷದ ಸಂಗತಿಯಾಗಿದೆ. **'ಸೂಳೆ', 'ಢಣ್ ಢಣಾ ಢಣ್', 'ಗಂಟೆ ಹತ್ತಾಯಿತು', 'ನಾಗರಿಕ ಅವತಾರಿ'** ಈ ನಾಲ್ಕು ಕವಿತೆಗಳು ಕನ್ನಡದಲ್ಲಿ ಈಚೆಗೆ ಪ್ರಕಟವಾದ ಯಾವ 'ನವ್ಯ ಕವಿತೆ' ಗಳಿಗೂ ಕಡಮೆಯುವೇನೂ ಅಲ್ಲ. ಆಡುವ ಮಾತಿನ ಹತ್ತಿರ ಹತ್ತಿರಕ್ಕೆ ಕಾವ್ಯದ ಭಾಷೆಯನ್ನೂ ತರುವ ಕೆಲಸದಲ್ಲಿ ಸಿದ್ದಣ್ಣನವರು ಯಶಸ್ವಿಯಾಗಿದ್ದಾರೆ. ನೂರು ಶಬ್ದಗಳಲ್ಲಿ ಹರಡಬಹುದಾದ ಭಾವವನ್ನು ಮೂರು ಶಬ್ದಗಳಲ್ಲಿ ಅಡಕಗೊಳಿಸುವ ಕೌಶಲ್ಯವೂ ಅವರ ಕೈಸೇರಿದೆ. ಪಾಶ್ಚಾತ್ಯ ಹೊಸ ಕವಿತೆಯ 'ತಂತ್ರ' ಗಳನ್ನು ಅವರು ಬಳಸಿಕೊಂಡಿದ್ದರೂ, 'ಮಂತ್ರ' ಮಾತ್ರ ನಮ್ಮದೇ,—ಕನ್ನಡದ್ದೇ—ಆಗಿ ಉಳಿದಿದೆ. ಅಂತೆಯೇ ಸಿದ್ದಣ್ಣನವರ ಕವಿತಾರಚನೆ ಸಾರ್ಥಕವಾಗಿದೆ.

* * *

ಇಷ್ಟು ಹೇಳಿದ ಬಳಿಕ ಈ ಕವಿತಾ ಸಂಕಲನದ ಬಗೆಗೂ ಈ ಕವಿಯ ಬಗೆಗೂ ಹೆಚ್ಚು ಹೇಳುವುದು ಅನವಶ್ಯಕ. ಬಾಯಿಗಿಟ್ಟು ತಿಂದು ನೋಡಿದಾಗ ಹೋಳಿಗೆಯ ಸವಿ ಗೊತ್ತಾಗುವುದೇ ವಿನಾ ಅದರ ವರ್ಣನೆಯನ್ನಾಲಿಸುವುದರಿಂದ ಗೊತ್ತಾಗದು. ಒಂದು ಕವನ ಸಂಕಲನದ ವಿಚಾರವೂ ಹಾಗೇ. 'ಹಕ್ಕಿ ಹಾರುತಿದೆ ನೋಡಿದಿರಾ!' ಎಂದು ಬೆರಳೆತ್ತಿ ತೋರಿಸಿದುದಾಯಿತು. ಹಕ್ಕಿಯ ಹಾರುವಿಕೆಯನ್ನು ಕೊರಳೆತ್ತಿ ನಿರೀಕ್ಷಿಸಿ ಆನಂದಿಸುವುದು ರಸಿಕರ ಪಾಲಿನ ಕೆಲಸ.

ಸಿದ್ದಣ್ಣನವರ 'ಮನೆ ತುಂಬಿದ ಬೆಳಕ'ನ್ನು ಕನ್ನಡದ ಪ್ರತಿಯೊಂದು ಮನೆಯೂ ಬರಮಾಡಿಕೊಳ್ಳಲಿ; ಇಂಥ, ಇದಕ್ಕಿಂತ ಶ್ರೇಷ್ಠವಾದ ಹಲವಾರು ಕವನಸಂಕಲನಗಳನ್ನು ಅವರು ಕನ್ನಡಸಾಹಿತ್ಯಕ್ಕೆ ಒದಗಿಸುವಂತೆ ಪ್ರೇರೇಪಿಸಲಿ.

ಮಲಾಪುರಡಿ
೮—೮—೧೯೫೪

**ಬಸವರಾಜ ಕಟ್ಟೀಮನಿ**

# ಪರಿಚಯದ ತರುವಾಯ

'ಮನೆ ತುಂಬಿದ ಬೆಳಕು' ನನ್ನ ಕವಿತೆಗಳ ಮೊದಲನೆಯ ಸಂಕಲನ. ಕಳೆದ ಮೂರು ನಾಲ್ಕು ವರುಷಗಳಲ್ಲಿ ಬರೆದ ಕೆಲವು ಕವಿತೆಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಈಗ ನಮ್ಮ ಸಾಹಿತ್ಯದಲ್ಲಿ 'ಸುಗ್ಗಿಯ ಕಾಲ'. ಸುಗ್ಗಿ ಬಂದಾಗ ಹಿಗ್ಗಿನಿಂದ ಹಾಡುವದು ನಡೆದುಬಂದ ರೂಢಿಯಲ್ಲವೆ ?

ನಾನು ಧಾರವಾಡಕ್ಕೆ ಬಂದಂದಿನಿಂದ ಶ್ರೀಗಳಾದ ಬಸವರಾಜ ಕಟ್ಟೀಮನಿ ಮತ್ತು ಚೆನ್ನವೀರ ಕಣವಿಯವರ ಸ್ನೇಹದ ನೆರಳಿನಲ್ಲಿ ನಡೆದುಬಂದಿದ್ದೇನೆ. ಅವರಿಬ್ಬರ ಕ್ರಿಯಾಶೀಲ ಬೆಂಬಲ ನನಗೆಷ್ಟೋ ಚೇತೋಹಾರಿಯಾಗಿ ಪರಿಣಮಿಸಿದೆ. ನನ್ನನ್ನು ಆಳವಾಗಿ ಅರಿತುಕೊಂಡ ಶ್ರೀ ಬಸವರಾಜ ಕಟ್ಟೀಮನಿಯವರು ಕನ್ನಡ ಸಾಹಿತ್ಯ ಪ್ರೇಮಿಗಳಿಗೆ ನನ್ನ ಮತ್ತು ನನ್ನ ಕವಿತೆಗಳ ವಿಮರ್ಶಾತ್ಮಕ ಪರಿಚಯ ಮಾಡಿಕೊಟ್ಟು ತುಂಬ ಉಪಕಾರ ಮಾಡಿದ್ದಾರೆ. ಈ ಹಿರಿಯ ಗೆಳೆಯರಿಬ್ಬರ ಸ್ನೇಹವನ್ನು ನಾನು ಯಾವಾಗಲೂ ನೆನೆಯುತ್ತೇನೆ.

ನನ್ನ ಎಳೆಯ ವಯಸ್ಸಿನಲ್ಲಿಯೇ ನನಗೊಂದು ಒಳ್ಳೆಯ ದಾರಿಯನ್ನು ತೋರಿಸಿಕೊಟ್ಟು, ಸಹಾನುಭೂತಿ ನೀಡಿ ಹರಸಿದ, ಹೆಸರಿಸಬಾರದ ಕೆಲವು ಜೀವಿಗಳು ಅಲ್ಲಲ್ಲಿ ಇದ್ದಾರೆ. ಅವರ ಆ ಸಂಪ್ರೀತಿಯ ನೆನಪಿಗೆ ನಮ್ರವಾಗಿ ಇಲ್ಲಿಂದಲೇ ವಂದಿಸುತ್ತೇನೆ.

ನನ್ನ ಹಲವಾರು ಕವಿತೆಗಳಿಗೆ ಆದರದ ಸ್ವಾಗತ ನೀಡಿ ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ಸಹಕರಿಸಿದ ಆಯಾ ಪತ್ರಿಕೆಗಳ ಸಂಪಾದಕರನ್ನು ಇಲ್ಲಿ ಸ್ಮರಿಸುವದು ಒಳ್ಳೆಯತನವೆನಿಸುತ್ತದೆ.

ಹೊಸ ಸಾಹಿತಿಗಳನ್ನು ಬೆಳಕಿಗೆ ತರುವ ಕೆಲಸದಲ್ಲಿ ಉದಾರ ಹೃದಯಿಗಳಾದ ಶ್ರೀ ಭಾಲಚಂದ್ರ ಘಾಣೇಕರರು ಈ ಕವನ ಸಂಕಲನವನ್ನು ಪ್ರಕಟಿಸಿ ಬಹಳ ನೆರವು ನೀಡಿದರು. ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಧಾರವಾಡ
೧೯೫೪ ಅಗಸ್ಟ ೧೫

—ಸಿದ್ದಣ್ಣ ಮಸಳಿ

# ಈ ಪುಸ್ತಕದಲ್ಲಿ....



# ಧಾರವಾಡದ ತಾಯಿ * *

೧

ಬಂದಿರುವೆನಿದೊ ಮಾಯಿ ಧಾರವಾಡದ ತಾಯಿ
ಸರ್ವಮಂಗಳೆ ನಿನ್ನ ಭಾಗ್ಯದುಡಿಗೆ ;
ಜನುಮ ಜನುಮದ ಬಯಕೆ ತುಂಬಿ ನಿಂದಿಹುದಿಂದು
ಕನಸಿನಲಿ ಕಂಡ ದಿನ ಬಂತು ಕೊನೆಗೆ.

೨

ಕೈಚಾಚಿ ಕರೆದಪ್ಪಿ ಎದೆ ತೆರೆದು ಕುಳಿತಿರಲು
ಜೀವದಲಿ ಜೀವವೇ ಇಳಿಯುತಿಹುದು ;
ಎದೆಯ ಬಟ್ಟಲು ತುಂಬಿ ಪ್ರೀತಿ·ಹೊರಸೂಸಿಹುದು
ನಾನು ನೀನೆಂಬುದನೆ ಮರೆಸುತಿಹುದು.

೩

ಬಾಲ್ಯದಿಂದಲ ನಿನ್ನ ತೊಡೆಯಲಾಡುವ ಮನಸು
ದಿನದಿನದಿ ಹಂಬಲದಿ ಕಂಡ ಕನಸು
ನಿನ್ನೆದೆಯ ಶ್ರೀಮಂತ ಮೃದುತಲದ ಹಾಸಿನಲಿ
ಮಲಗಿ ನಾ ಹಾಲುಂಡ ದಿನಗಳೇನು !

೪

ಮರದ ಎಲೆ ಅಲುಗಲೂ ದೈವ ಕೃಪೆ ಬೇಕಂತೆ
ಇದರಲಂತಹದೇನೊ ಇರಲೆ ಬೇಕು ;
ದೈವ ಕರೆದೊಯ್ಯುತ್ತ ನಾವು ಹೋಗಲೆ ಬೇಕು
ನಂಜಿದ್ದರೂ ಅದನು ಕುಡಿಯಬೇಕು.

೫

ದುಃಖ ಸುಖಗಳ ಎದೆಯ ನೂರು ಹಂಬಲ ತೊರೆದು
ನಿನ್ನ ಉಡಿಯೊಂದನ್ನು ನೆನೆಸಿ ಬಂದೆ;
ನನ್ನ ಕರುಳಿನ ಬಳ್ಳಿಯಲ್ಲಿ ಅರಳಿರುವಂಥ
ಪ್ರೀತಿ ಹೂವೊಂದನ್ನು ಹೊತ್ತು ತಂದೆ.

೬

ನಿನ್ನ ಕಣ್ಣಂಚಿನಲಿ ಮಿಂಚು ಹೊಳೆಯುತಲಿರಲು
ನನ್ನ ಎದೆಮನೆಯಲ್ಲಿ ಬೆಳಕೆ ಬೆಳಕು
ಕರೆದು ಆಶೀರ್ವದಿಸಿ ತಾಯಿ ಬೆಳಗುತಲಿರುವ
ಕಣ್ಣ ಬೆಳಕಿನ ಪುಣ್ಯ ಇಹುದು ಸಾಕು.

## ಒಳದನಿ

ಬಂದವರು ಬಂದಿರಲಿ ಹೋದವರು ಹೋಗಿರಲಿ
ನಿನ್ನ ಜತೆ ನಾನಿರಲು ಸಾಲದೇನು ?
ಅವರಿವರು ಹಾಗಿರಲಿ ಈ ದಾರಿ ನಿನಗಿರಲಿ
ನೂರಾರು ಸಂಕಷ್ಟ ಬಂದರೇನು.

ತೇಲು ನೋಟದ ಜನರ ಅಣಕು ನುಡಿಗಳ ಕೇಳಿ
ಎದೆನೊಂದು ಬಗೆಗೆಡುವ ಮನವು ಬೇಡ;
ನಿನ್ನ ಹೆಗ್ಗುರಿ ದಾರಿ ಬಹುದೂರ ಹರಿದಿಹುದು
ಮುತ್ತಿನಂತಹ ಮಾತು ತಿಳಿದು ನೋಡ.

ಜೀವನದ ಕಠಿಣತೆಯ ಕಂಡುಂಡು ಅನುಭವಿಸಿ
ಕರ್ತವ್ಯ ಪಾಲನೆಗೆ ಮುಂದೆ ನುಗ್ಗು;
ಅನುಭವದ ಆಳದಲಿ ನೂರ್ಕೋಟಿ ರತ್ನಗಳ
ಬೆಳಕು ಝುಗಝುಗಿಸಿರಲು—ಎಂಥ ಹಿಗ್ಗು.

ಹಿರಿದಾದುದರ ಕಡೆಗೆ ಹರಿದೋಡಿ ಹೋಗುವದು
ನಿನ್ನ ಬಾಳಿನ ನಿತ್ಯ ಮಂತ್ರವಿರಲಿ !
ಜೀವನದಗಾಧತೆಯ ಅರಿವಿನಾಳದ ತಳಕೆ
ಮುಳುಗಿ ಏಳುವ ತನಕ ತಾಳ್ಮೆಯಿರಲಿ !

---

## ಕಣ್ಣೀರ ಸಾಕ್ಷಿ    *    *    *

ತಾಯಿ ಮಂಗಲ ತೋಳ ತೊಟ್ಟಿಲ
ತೂಗಿ ಲಾಲಿ ಹಾಡಿ ;
ಮಗುವೆ ಅಳದಿರು ಹಾಲು ಹೊಳೆಯಿದೆ
ಎಂದೆ ಮುದ್ದು ನೀಡಿ.

ನಿನ್ನ ' ದರ್ಶನ ' ನನ್ನ ಬಾಳಿಗೆ
ದಿವ್ಯ ದೀಪ ಕಿರಣ;
ಜೀವ ಜೀವದಿ ಹರಿದು ಬಂದಿದೆ
ಇದಕೆ ಇಲ್ಲ ಮರಣ.

ಸೂರ್ಯ ಚಂದಿರ ಬಯಲು ಬಾಂದಳ
ಸಾಕ್ಷಿ ಇರಲಿ ಇದಕೆ!
ಕಣ್ಣ ಕೊನೆಯಲಿ ನೀರ ಹನಿಯಿದೆ
ನಮನವಿರಲಿ ಅದಕೆ!

## ವಿಷಕನ್ನೆ

*　　*　　*

ಮುಟ್ಟದಿರು ದೂರಸರಿ, ಎದೆಹೀನ ವಿಷಕನ್ನೆ
　ಮೋಹಿಸುವ ಮುಖರೂಪ ಜೇನ್-ಸವಿಯ ರಸಗೆನ್ನೆ
　ಸೆರಗು ಮರೆಯಾಗಿರಿಸಿ ಕರೆಯುತಿಹ ಕಣ್-ಸನ್ನೆ.

ತುಂಬಿದೆದೆ, ನಳಿದೋಳು ಚೆಂದುಟಿಯ ರಸದ ಕೆನೆ
ಒಗ್ಗೂಡಿ ನಿನ್ನಲ್ಲಿ ಚೆಲ್ವಿಕೆಯೆ ಮೈವೆತ್ತು
　ಚಣ ಚಣಕು ಚುಂಬಿಸಿದೆ ಕಣ್ಮನಕೆ ರಂಭಿಸಿದೆ
　ಚಂದ್ರನೆದೆ ರೋಹಿಣಿಯು ಸವಿಗನಸ ಬಿಂಬಿಸಿದೆ.

ಏನಾದರೇನಿಹುದು? ನಿನ್ನ ಮೈ ರಸತುತ್ತು
ನನ್ನೊಡಲ ಕಡಲಿನಲಿ ವಿಷದ ಹನಿಹನಿಯಾಗಿ
　ಬೆರೆಯುತಿದೆ; ಕೊಲ್ಲುತಿದೆ ಪ್ರೀತಿಯನು ತಕ್ಕೈಸಿ
　ಗುಣಹೀನ ಚೆಲ್ವಿಕೆಯು ಬರಿರೂಪ ವಿಷರಾಸಿ.

ಒಲವಿರದ ನಿನ್ನೆದೆಯು ಒಡೆದು ಪುಡಿಪುಡಿಯಾಗಿ
　ಕೂಡುತಿದೆ ಮಣ್ಣಿನಲಿ. ಕಾಮಕುಂಡದಿ ಸುಟ್ಟು
　ಪ್ರೇಮ ದೀಕ್ಷೆಯ ತೊಟ್ಟು ಬಳಿಗೆ ಬಾ--ಮೈಮುಟ್ಟು.

# ಹೂವು ಹಣ್ಣು ಬಿಡಲಿ ೦ ೦

೧

ಗಳಿಗೆ ಗಳಿಗೆಗೂ ಎದೆಯ ಕಡಲಿನಲಿ
ಆಳಲ ತೆರೆಗಳೆದ್ದು ;
ಪಡಕೆ ಅಪ್ಪಳಿಸಿ ಮನವ ಕಲಕುತಿವೆ
ಕಳೆದ ನೆನಹು ತಂದು.

೨

ಹಗಲು ಮನಸಿನಲಿ ಇರುಳು ಕನಸಿನಲಿ
ಚಿತ್ರ ನೂರು ನೂರು !
ಮುಗಿಲ ತೇರಿನಲಿ ತೇಲಿ ಬಂದಿರಲು
ಕಣ್ಣ ತುಂಬ ನೀರು.

೩

ಕರುಣೆ ಹೂವಿನಲಿ ಎದೆಯ ಹಾಲಿನಲಿ
ನಕ್ಕ ತಂಗಿ ತಾಯಿ !
ಅಗಲಿ ಹೋಗಿಹರು ಮರಳಿ ಬರದಿಹರು
ಅಕ್ಕ ಅಣ್ಣ ಗೌರಿ.

೪

ಅವರ ಎದೆಯ ಉಲಿ ಮೌನವಾಂತಿರಲು
ಶಿವನೆ ಬಾಳಿದೇನು !
ಏಸೊ ನೆನಹುಗಳು ' ಪ್ರೀತಿ ಗುರುತು 'ಗಳು
ಎಲ್ಲ ಕನಸು ಏನು ?

೫

ಮನವು ಮಿಡಿದಿರಲು ಹೃದಯವಳುತಿರಲು
ಕಣ್ಣು ತುಂಬಿ ಹರಿದು ;
ನನ್ನ ಕರುಣಾಳು ತಾಯಿ ಕನಸಿನಲಿ
ನುಡಿವಳೆದೆಗೆ ಬಂದು.

೬

ಅಗಲಿ ಹೋದವರು ಮರಳಿ ಬರದಿರಲು
ಮೂಕ ಶೋಕವೇನು ?
ಬರಲಿ ಬಂದವರು ಎಲ್ಲ ನಿನ್ನವರು
ಕೊನೆಗೆ ನಿನಗೆ ನೀನು.

೭

ನಿನ್ನ ಇರವಿನಲಿ ಧೈರ್ಯವಿರುತಿರಲಿ
ಮರೆತೆಯೇನು ಎಲ್ಲ ?
ಮಾತು ಮಾತಿನಲಿ ಪ್ರೀತಿ ಹರಿದಿರಲಿ
ಬಾಳು ಬೇವು ಬೆಲ್ಲ.

೮

ನಿನ್ನ ಎದೆಯ ಗಿರಿ ಕರಗಿ ನೀರಾಗಿ
ಹರಿದು ಬರುವೆ ನಾನು ;
ಕವಿಯ ಬಾಳ್ಗರಿಗೆ ತೋರು ಬೆರಳಾದ
ಅನ್ನಪೂರ್ಣೆ ನಾನು.

೯

ನಿನ್ನ ಕಣ್ಣಿನಲಿ ನನ್ನ ಹೃದಯವನು
ಅಳೆದು ನೋಡಬಹುದು ;
ಕಣ್ಣ ಮಿಂಚಿನಲಿ ಕಂಡ ಬೆಳಕಿನಲಿ
ಗುರಿಯ ಕಾಣಬಹುದು.

೧೦

ನಾನು ಹರಿದಿರುವ ಎದೆಯ ಭೂಮಿಯಲಿ
ಕಾವ್ಯ ಸಸಿಯು ಉದಿಸಿ
ಸಭಕು ಬೆಳೆದಿರಲಿ ನೆರಳು ನೀಡಿರಲಿ
ಹೂವು ಹಣ್ಣು ಬಿಡಲಿ !

---

## ಕಣ್ಣು ಕಣ್ಣು ಕೂಡಿದಾಗ * *

೧

ಕಣ್ಣು ಕಣ್ಣು ಕೂಡಿದಾಗ
ಮಿಂಚು ಹೊಳೆಯು ಹರಿಯುವಾಗ
ಜೀವಪಕ್ಷಿ ಭಾವದುಂಬಿ ನಲಿಯುತಿದ್ದಿತು ;
ನೂರು ಆಶೆ ನೂರು ದಾರಿ
ಎಲ್ಲ ಮರೆತು ನಿನ್ನ ಸೇರಿ
ಎದೆಯ ನೀಲ ಗಗನದಲ್ಲಿ ಹಾರುತಿದ್ದಿತು.

೨

ಮಾತು ಮೂಕವಾಗುತಿರಲು
ಎದೆಯಲೇನೊ ಮಿಡಿಯುತಿರಲು
ಪ್ರೀತಿ ಲತೆಯು ಕೈಯ ಚಾಚಿ ಬರುವೆನೆಂದಿತು,
ಇರುವ ಚಣವನೊಮ್ಮೆ ಮರೆದು
ಬರುವ ಬಾಳನೊಮ್ಮೆ ನೆನೆದು
ಹೃದಯ ಪಕ್ಷಿ ಹೊನ್ನ ಕನಸ ಕಾಣತೊಡಗಿತು.

೩

ನೆಟ್ಟ ದೃಷ್ಟಿ ದೈನ್ಯಭಾವ
ಆಶೆ ಹೊತ್ತು ನಿಂತ ಜೀವ
ಕರುಣ ಕಣ್ಣು ತೆರೆದು ನಿಂತ ಶಿಲೆಯ ಮೂರುತಿ.
ಕಣ್ಣು ಕಣ್ಣು ಸಂಬುತಿರಲು
ಕನಸು ನನಸನಪ್ಪುತಿರಲು
ಪ್ರೇಮಜೀವಿ ಕಣ್ಣಕಾಂತಿ ಬೆಳಕಿನಾರತಿ.

೪

ನಾನು ನೀನು ಸಂಬಿ ಬಂದು
ಎದೆಗೆ ಎದೆಯು ಕೂಡಿದಂದು
ಮುಗಿಲ ತೆರೆಯು ಹರಿದು ಸಾವು ಓಡಿಯೋಡಿತು ;

ನಾನು ನೀನು ನೀನು ನಾನು
ಎಂಬ ಮಾತು ಏನದೇನು ?
ನಾನು ನೀನು, ಬೆರೆತ ಮನದಿ ಮರೆತೆ ಹೋಯಿತು.

# ಕಣ್ಣೀರಿನೊಡನೆ

ನನ್ನೆಳೆಯ ದಿನಗಳಲಿ ಕೂಡಿ ಹಾಡಿದ ತಂಗಿ
ನನ್ನ ಕಣ್ಮರೆಯಾಗಿ ಹೋದೆಯಲ್ಲ ;
ಮಾತು ಮಾತಿಗೆ ಹೂವ ಸುರಿಸಿ ನಗಿಸುವ ಜೀವಿ
ಬಾಳುದ್ದಕೂ ನೆನವೆ ನಿಂತಿತಲ್ಲ.

ಭೂದೇವಿ ಮಂದಿರದ ಗರ್ಭಗುಡಿ ಬಾಗಿಲಲಿ
ತೋಳ ತೊಟ್ಟಿಲದಲ್ಲಿ ಹೊತ್ತು ನಿಂದು
ದೈನ್ಯದಲಿ ಕೈಚಾಚಿ ಅವಳೆದೆಯ ಉಡಿಯಲ್ಲಿ
ಮಲಗಿಸಿದೆ ಕಾಪಾಡು ನಿನ್ನದೆಂದು.

ಕಾಲನಾರಾಧನೆಯ ಮೊದಲನೆಯ ಬಲಿದಾನ
ನೀನಾದೆ ಶ್ರೀಗೌರಿ ನೆಲವ ಸೇರಿ ;
ನಮಗೆಲ್ಲ ಅಗಲಿಸಿತು ಮಣ್ಣಿನಲಿ ಮಲಗಿಸಿತು
ನಿನ್ನುಸಿರ ರಸವನ್ನು ಸಾವು ಹೀರಿ.

ಕಣ್ಣೀರಿನೆಣ್ಣೆಯಲಿ ಆಶೆ ದೀಪವ ಉರಿಸಿ
ನಿನ್ನ ಗೋರಿಯ ಮೇಲೆ ಇಟ್ಟು ಬಂದೆ.
ನಿನ್ನಾಸೆ ನನ್ನಾಸೆ ಕೈಗೂಡಿ ಬರಲೆಂದು
ನಿನ್ನ ಆಶೀರ್ವಾದ ಹೊತ್ತು ತಂದೆ.

---

## ನಿನ್ನಡಿಯೇ ಸಾಕು * * *

ಶಿವ-ಶಕ್ತಿಯ ಸಮ್ಮಿಲನದಿ ಕಿಡಿ ಸೂಸುವ ಬೆಳಕೆ
ಮನ ಮಂದಿರ ಜಗ ಬೆಳಗಲು ಬಾರೆನ್ನಯ ಮನಕೆ.

ರಸನಿಲ್ಲದ ಬರಿ ಬಾಳಿಗೆ ಕಡು ಹೇಸಿದೆ ಜೀವ
ಕಾರುಣ್ಯದ ನಿನ್ನೊಲವಿಗೆ ಕಾತರಿಸಿದೆ ಭಾವ.

ದಿನ ದಿನದಲಿ ತನುಮನದಲಿ ಪರಿಪರಿಯಲಿ ಮರುಗಿ
ಕರುಳಿನ ಕರೆ ಮೊರೆಯಿಡುತಿರೆ ಕರುಳರಿಯದೆ ಕರಗಿ.

ನಿನ್ನೊಲುಮೆಯ ಎದೆ ಹಾಲಿನ ಮುಂಪಾವುಸು ಜೇಡ
ಬಾಳೊರತೆಯು ನಿರ್ಝರಿಣಿಯು ನಿನ್ನಿಂದಲೆ ನೋಡ.

ಬಾನ್ನೀಲಿಯ ಸೀಮಂತಿನಿ ಆಕಾಶದ ಗಂಗೆ
ಮಾತಿಲ್ಲದ ಮಂದಾಕಿನಿ ಹರಿಸ್ಪೃತರು ತುಂಗೆ.

ಬೆಳುದಿಂಗಳ ಹೊಳೆ ಹರಿದಿರೆ ಈ ಭೂಮಿಯ ಸೇರಿ
ಆ ಹೊಳೆಯಲಿ ನೀ ಬರುವೆಯ ಹೊಂದೋಣಿಯನೇರಿ.

ಮಳೆ ಮುಗಿಲಿಗೆ ಚಳಿ ಚಿಮುಕಲು ಅವರಾತ್ಮವೆ ಕರಗಿ
ಇಳೆಗಿಳಿದಿರೆ ಹನಿಹನಿಯಲಿ ಬಾರೊಡನೆಯೆ ನಾಗಿ.

ಹೂ ಹೂವಿನ ಮಕರಂದದ ರಸ ಜೇನನು ನೀಡಿ
ರಸಜೀವಿಯ ಎದೆಯರಳಿಸು ಸುಳಿಗಾಳಿಯ ಕೂಡಿ.

ರಸರೂಪಸಿ ಕಾವ್ಯಾಂಗನೆ ಕುಣಿದಾಡಲು ತಾನ
ಸಿರಿ ಕಿಂಕಿಣಿ ಝುಣ ಝುಣ ಝುಣ—ನನ್ನಾತ್ಮವೆ ಮೌನ.

ರಸವಾಗಲಿ ವಿಷವಾಗಲಿ ನಿನ್ನೊಲುಮೆಯೆ ಬೇಕು
ಶ್ರೀಪೂರ್ಣೆಯೆ ಎಂದಾದರು ನಿನ್ನಡಿಯೇ ಸಾಕು !

# ಕವಿತೆಗೊಂದು ಕಾಗದ        *        *

೧

ಒಂದು ತಿಂಗಳು ಇಂದು ಪೂರ್ಣವಾಯಿತು ಕವಿತೆ
ನಾವೀರ್ವರಾ ಇರುಳು ಅಗಲಿದಂದು ;
ಮೌನ ಮೈತಳೆದಿತ್ತು ಮೊಗಬಾಡಿ ಹೋಗಿತ್ತು
ಕಣ್ಣ ಕೊನೆಯಂಚಿನಲಿ ಅಶ್ರುಬಿಂದು.

೨

ಎದೆಗೆದೆಯ ಹೊಂದಿರಿಸಿ ಕುರುಳುಗಳ ನೇವರಿಸಿ
ತುಟಿಗಳಲಿ ಜೇನಿರಿಸಿ ರಮಿಸಿ ರಮಿಸಿ ;
ಕಣ್ಣೊರಿಸಿಕೋ ಕವಿತೆ ಎಂದು ನಾ ನುಡಿದಾಗ
ಅಳಲ ತೋರೆಯೇ ಬಂತು ದಡವ ಸೂಸಿ.

೩

ಕನಸಿನಲ್ಲಾದರೂ ಅಗಲಿಕೆಯು ಬರದಿರಲಿ
ಎಂದು ದಿನವೂ ಹೃದಯ ನುಡಿಯುತಿತ್ತು ;
ಆದರೇನೊಂದು ದಿನ ಈ ದುಃಖ ಈ ಮೌನ
ಬರಲೆ ಬೇಕಿತ್ತಲ್ಲ—ಬಂದುದಾಯ್ತು !

೪

ಕರುಳ ಬಳ್ಳಿಯೆ ಹರಿದು ಹೋಯಿತೆನುವಂತೆಯೇ
ಹೋಗಬಾರದ ನೀನು ಹೋದೆಯೇನು !
ಆ ದಿನದ ಆ ಇರುಳು ಆ ಮಾತು ಆ ನೆನಹು
ಆಜನ್ಮಪರ್ಯಂತ ಕೊನೆಯದೇನು.

೫

ಎದೆಯಾಳ ತಳದಲ್ಲಿ ಏನೊ ತಳಮಳವಲ್ಲಿ
ದೇಹವನೆ ಸುಡುತಿಹುದು ರಕ್ತ ಹೀರಿ
ದಿನ ದಿನವು ಆ ನೆನವೆ ತಪ್ತಾಗ್ನಿ ರಸದಂತೆ
ತೂರಿ ಬರುತಿಹುದಲ್ಲ ಬೆಂಕಿ ಕಾರಿ!

೬

ನಿನ್ನ ಪ್ರೀತಿಯೆ ನನಗೆ ಊರುಗೋಲಾಗಿಹುದು
ಈ ಬಾಳಿನುದ್ದಕೂ ದಾರಿದೀಪ
ನಾವಳಿದು ಮಣ್ಣಿನಲಿ ಮಣ್ಣಾಗಿ ಹೋದರೂ
ಪ್ರೀತಿಗಾದರು ಬೇಡ ದೈವಶಾಪ.

# ಸೌಭಾಗ್ಯವೆ ಬರಲಿ * * *

ಇಂದಾದರು ಮುಂದಾದರು ಎಂದಾದರು ಇರಲಿ
ಮನೆ ಮನೆಯಲಿ ನಗೆಯರಳಲಿ ಸೌಭಾಗ್ಯವೆ ಬರಲಿ.

ಹಳೆ ಬಾಳಿನ ಕೊಳೆ ಹೋಗಲಿ ಹಸನಾಗಲಿ ಬಾಳು
ಮೈ ಮನಸೂ ಹೊಸದಾಗಲಿ ಕಹಿ ದುಃಖವ ಹೂಳು.

ಮನ ಮೂಡಲ ಭೂರಂಗದಿ ಉಷೆ ಬರುವಳೆ ಕುಣಿದು
ಕಣ್ಣಂಚಿನ ಸಿರಿ ಮಿಂಚಿನ ಎರಡಾರತಿ ಹಿಡಿದು.

ಮಾಯಾಂಗನೆ ಮರೆಯಾಗಲಿ ಅಮರಾಂಗನೆ ಬರಲಿ
ಸುಖ ಸ್ಪರ್ಶದಿ ಮೈ ಮರೆಯಿಸಿ ಮಧುರಸವನೆ ತರಲಿ.

ಕೈಕಂಕಣ ಮೈ ಅರಿಷಿಣ ಸಿರಿ ಕುಂಕುಮ ಹಣೆಗೆ
ಮಾಂಗಲ್ಯದ ಕರಿಮಣಿ ಸರ ಸೊಬಗೀಯಲಿ ಉಷೆಗೆ.

ಬಾನ್-ಹಂದರ ರವಿ ಚಂದಿರ ನಕ್ಷತ್ರದ ಸೇಸೆ
ಶಿವ-ಪಾರ್ವತಿ ಶ್ರೀಭಾರತಿ ಮೈದೋರುವ ಆಸೆ.

ಕರಿ ಕುರುಳಲಿ ಘಮಘಮಿಸಲಿ ಹೂಮಾಲೆಯ ಸುರುಳಿ
ಜೇನಿರುಳಿನ ಸಂಗೀತಕೆ ನವಿಗೊರಲಿನ ಮುರಲಿ.

ಮೈಕೈಗಳ ಆಲಿಂಗನ ತುಟಿ ತುಟಿಗಳ ಕೂಟ
ಕಣ್-ಮನಗಳು ಜೋಂಪಿಸಲಿ—ಅಧರಾಮೃತದೂಟ.

ಎರಡೆದೆಗಳ ಹಿರಿಯಾಸೆಗೆ ಕವಿ ಹಾಡುವ ಪಕ್ಷಿ
ಶಿವ-ಮಂಗಲ ಸಮ್ಮಿಲನಕೆ ಈ ದಿನವೂ ಸಾಕ್ಷಿ.

# ಕಾವ್ಯಪೂರ್ಣೆ                * * *

೧

ಕವಿಯ ಕನಸಿನ ಎದೆಯ ಪರದೆಯ
 ಸರಿಸಿ ಝಣರಿಸಿ ಕಂಕಣ ;
ಗಾಳಿಯಲೆಯಲೆಯೊಡನೆ ನರ್ತನ
 ಕಾಲ ಗೆಜ್ಜೆಯ ಝಣ್....ಝಣ

೨

ಮುಂದೆ ಬಾರದೆ ತಡೆದಳಲ್ಲಿಯೆ
 ಬಾಗಿಲಲಿ ಬಂದಂತೆಯೆ ;
ದೃಷ್ಟಿಯೂ ನೆಲಕಿಳಿದು ಹೋಯಿತು
 ಯಾರು ... ? ಏನೆನುವಂತೆಯೆ.

೩

ಇಲ್ಲಿ ವರೆಗೂ ಬಂದು ಅಲ್ಲಿಯೆ
 ಏಕೆ ನಿಂದಳೊ ತಿಳಿಯದು ;
ಗಲ್ಲದಲಿ ನಸು ಲಜ್ಜೆ ಮೂಡಿದೆ
 ಏನೊ ಎಂತೋ ಪೊಳೆಯದು.

೪

ಹೃದಯದೊಳಗೂ ಹೊರಗು ಎಲ್ಲಿಯು
 ಮೌನವೇ ಅವತರಿಸಿದೆ ;
ಪುಣ್ಯ ಮಂಗಲ ಕೋರಿ ನಿಂದಿದೆ
 ಕವಿಗು ಆಶೀರ್ವದಿಸಿದೆ.

೫

ಮನದ ಮಲ್ಲಿಗೆಯರಳು ಅರಳಿದೆ
 ಮಧುರ ಸೌರಭ ಸೂಸಿದೆ ;
ಅಂತರಂಗವೆ ಕರಗಿದಂತಿದೆ
 ಕರುಣೆಯೇ ಕಣ್-ತೆರೆದಿದೆ.

೬

ಪಾರಿಜಾತದ ಹೂವಿನಂತಹ
  ವಿನಯವೇ ಹಿರಿ ಗುರುತಿಗೆ
ಹೂವಿನೊಳಗಣ ಮಧುರ ಗಂಧವೆ
  ಇಹುದು ಸರಿಸಮ ಪ್ರೀತಿಗೆ.

೭

ತುಂಬಿದೆದೆ ನಳಿದೋಳು ಬಾಳಿಯ
  ಸುಳಿಯ ಹೋಲಿಕೆ ದೇಹಕೆ;
ಜೀವ ಕೇಳದೆ ಎದೆಗೆ ಬಂದಿರೆ
  ಇಂದ್ರ ಲೋಕಕು ನಾಚಿಕೆ.

೮

ಕಣ್ಣು ಅರಳಿದೆ ಹೆರಳು ನಡಿಲಿದೆ
  ಸೆರಗು ಜಾರಿದೆ ತೋರಿದೆ
ಜೀವ ಜೀವದಿ ಜೇನ ಹನಿ ಹನಿ
  ಕರುಳು ಕರುಳಲಿ ಕರಗಿದೆ.

# ಬೆಳೆದು ಬಂದ ಬಯಕೆ

*          *

೧

ದಿವಸ ದಿವಸ ಕಳೆದು ಇಂದು ವರುಷ ತುಂಬಿ ನಿಂತಿದೆ
ನೂರು ನೋವನೆಣಿಸಿ ಗುಣಿಸಿ ಮನಕೆ ಮಂಕು ಕವಿದಿದೆ
ಹಗಲು ಇರುಳು ನೆನವೆ ಬುತ್ತಿ
ಹೃದಯದೊರತೆಯೆಲ್ಲ ಬತ್ತಿ
ದೇಹವೆಲ್ಲ ಕರಗಿ ಸೊರಗಿ ಬಾಳು ಬೇಸರೆನ್ನುವದೆ
ಜೀವ ಮೌನ ತಾಳಿದೆ.

೨

ಇಂದು ನಗುವೆ ಇಲ್ಲವಾಯ್ತು
ಮೌನ ಭಾರದಿಂದ ಸೋತು
ದೇಹ ಭೂಮಿಗಿಳಿದಿದೆ
ಧೂಳಿಯಲ್ಲಿ ನರಳಿದೆ;
ನನ್ನ ಸುತ್ತು ಮುತ್ತಲೇನು
ಮುಖವನೆತ್ತಿ ನೋಡಲೇನು
ಚಣ ಚಣಕೂ ಕರುಳ ಕೆಣಕಿ ಕಣ್ಣೊರಿಯುವ ಕತ್ತಲಿ
ಅದರ ಕುಣಿತ ಬತ್ತಲಿ !

೩

ದುಃಖ ಅತಿಥಿಯಂತೆ ಬಂದು
ಮನೆಯ ಹೊಸ್ತಿಲಾಚೆ ನಿಂದು
ನನ್ನ ಕೂಗಿ ಕರೆದರೆ
ಬಾಗಿಲನ್ನು ಬಡಿದರೆ
ಕರುಣೆ ಇಲ್ಲದವರ ತೆರದಿ ಅದಕೆ ಬೇಡವೆನ್ನಲೆ?
ನನ್ನತನವ ಮರೆಯಲೆ?

೪

ತಾಕ್ಕೆ ಬಾನ ಬಿತ್ತರ
ಹಿಮಾಲಯಕು ಎತ್ತರ
ಅವರ ಪೂರ್ವ ಪುಣ್ಯವೇನೊ
ಸೌಭಾಗ್ಯದ ಚಿಹ್ನೆಯೇನೊ
ಹೃದಯದಾಳದಲ್ಲಿ ಮೌನ ಗರ್ಭಧರಿಸಿದಂತಿದೆ
ಬೆಳಕಿಗಾಗಿ ತಪಿಸಿದೆ.

೫

ನನ್ನ ಎದೆಯ ಮೂಡಲಲ್ಲಿ
ಕನಸು ಮನಸು ಕೂಡುವಲ್ಲಿ
ಇಂದು ಇಲ್ಲವಾದರೂ
ಮುಂದೆ ಒಮ್ಮೆ ಯಾದರೂ
ಹಾಲು ಹಣ್ಣು ಹೂವು ಜೇನು ಹೊತ್ತು ಬರನೆ ಚಂದಿರ
ಕಣ್-ಮನಕೂ ಸುಂದರ!

೬

ಪೂರ್ಣಕಲಾ ಪುಣ್ಯಮಾಯಿ
ಬೆಳುದಿಂಗಳ ಹಾಲ ತಾಯಿ
ಇರುಳ ಜೋಗುಳನ್ನು ಹಾಡಿ
ಕಣ್ಣು ತುಂಬುವಂತೆ ನೋಡಿ
ಈ ಚಂದ್ರಮ ಈ ಸಂಭ್ರಮ—ನಿನಗೆ ಇರಲಿ ಎನ್ನಳೆ?
ಉಡಿಯ ತೆರೆದು ಕರೆಯುಳೆ!

## ಹರಸು ತಾಯಿ * * *

೧

ತಾಯ್-ತನದ ಕರುಣೆಯೇ ಸಕಲ ಸೌಭಾಗ್ಯವೇ
ನಿನ್ನ ನುಡಿಗೂ ಇಂದು ಮೌನ ಬಂತೆ!
ಎದೆಯ ಸೆರಗನು ಹೊದಿಸಿ ಕಣ್ಣ ಬೆಳಕನು ಹರಿಸಿ
ಹಾಲ ಕುಡಿಸಿದ ಪುಣ್ಯ ಬರಿದಾಯಿತೆ!

೨

ಹೃದಯ ವೀಣೆಯ ತಂತಿ ಚಟಚಟನೆ ಹರಿದಂತೆ
ಕರುಳ ಬಳ್ಳಿಯೆ ಹರಿದು ಚೂರು ಚೂರು;
ಯಾವ ಪಾಪದ ಶಾಪ ಬಂದು ಬಡಿದಿಹುದಿಂದು
ಅಳಲ ಒರತೆಯು ತುಂಬ ಕಣ್ಣ ನೀರು.

೩

ಈಸು ದಿನ ಹಂಬಲದಿ ತುಂಬಿದುಡಿಯಲಿ ತೂಗಿ
ಈಗ ಬರಿಯುಡಿ ಹಿಡಿದು ಹಾಡಬಹುದೆ?
ಈ ಮೌನದಾಳವೋ ಬಹು ಗುಂಭ ಗಂಭೀರ
ಅದರ ತಳಕೂ ಮುಳುಗಿ ಏಳಬಹುದೆ?

೪

ತೀರ್ಥ ಕ್ಷೇತ್ರಗಳಂತೆ—ಬರಿಯ ಗಜಿಬಿಜಿ ಸಂತೆ
ನಿನ್ನ ಹೃದಯದಲಿಹುದು ದೈವಶಕ್ತಿ;
ಬರುವೆಯಾ ಕನಿಕರಿಸಿ ಹಾಲ ಹೊಳೆಯನು ಹರಿಸಿ
ನಿನ್ನ ನೆನಹಿನ ಫಲವೆ ಬಂಧಮುಕ್ತಿ.

೫

ನಿನ್ನ ಹೆಸರೇ ನನಗೆ ಬೆಂಗಾವಲಾಗಿರಲಿ
ಜನ್ಮ ಜನ್ಮಾಂತರದಿ ಬಂದು ಕಾಯಿ;
ಪ್ರೀತಿ ಆಶೀರ್ವಾದ ಪುಣ್ಯವೊಂದೇ ಸಾಕು
ಜೀವ ರಕ್ಷೆಯ ನೀಡಿ ಹರಸು ತಾಯಿ.

# ಸುಳಿಗಾಳಿಯೊಡನೆ * * *

೧

ಹನ್ನೆರಡು ವರುಷಗಳು ಮೇಲೇನೂ ದಿವಸಗಳು
ಭೂತಕಾಲದ ಗರ್ಭಗೋರಿಯಲ್ಲಿ;
ಉರುಳಿ ಹೋದರು ಕೂಡ ಮರಳಿ ಸುಳಿದಾಡಿಹವು
ನೊಂದ ಜೀವಿಯ ಮನದ ರಂಗದಲ್ಲಿ.

೨

ಕವಿ ಶಿಸುವ ಬೆಳೆಸಿರುವ ಮೊಲೆಹಾಲನುಣಿಸಿರುವ
ವಿಜಯಪುರವೇ ನಿನ್ನ ಮರೆಯಲಾರೆ;
ನೂರಾರು ಮೈಲುಗಳ ಗಡಿಯಾಚೆ ನಿಂತರೂ
ಎದೆಯ ಹಂಬಲವನ್ನು ತೊರೆಯಲಾರೆ.

೩

ಅರೆಬೀಳು ಕೋಟೆಗಳು ಆ ಹಾಳು ಗೋರಿಗಳು
ಕೂಗಿ ಕರೆದಿವೆ ಕವಿಯು, ಬಾರೊ ಎಂದು;
ತಮ್ಮ ಮೇಲೊಂದೊಂದು ಕಾವ್ಯಕೃತಿ ರಚಿಸೆಂದು
ಅಂಗಲಾಚಿವೆ ಕಣ್ಗೆ ನೀರ ತಂದು.

೪

ದುಃಖದಲಿ ಬಿಕ್ಕಿರುವ ನಗುನಗುತ ಬಾಳಿರುವ
ನಿಮ್ಮ ನೆರಳೇ ನನಗೆ ತೌರಾಗಿದೆ;
ಮರಣ ಶಯ್ಯೆಯ ಮೇಲೆ ಕೊನೆಯ ಉಸಿರೆಳೆಯದಿರಿ
ಕವಿಯ ಕರುಳೇ ಕರಗಿ ನೀರಾಗಿದೆ.

೫

ನನ್ನ ಹೃದಯುವ ನೋಡಿ ಕಾವ್ಯಕಲ್ಪನೆ ನೀಡಿ
ನಿಮ್ಮತನ ಸರ್ವಸ್ವಪೌದಾರ್ಯಕೆ ;
ಕಾವ್ಯಕೃತಿಯಲ್ಲೊಂದು ಸ್ಮೃತಿಯ ದೀಪಸ್ತಂಭ
ನಿಲ್ಲಿಸಿದರಾದಿನವೆ ಋಣ ತೀರಿತೆ ?

೬

ನಿತ್ಯ ನಿಲ್ದಾಣದಲಿ ಸಿಳ್ಳು ಹೊಡೆಯುವ ಗಾಡಿ
ಹೊತ್ತು ತರದಿಹುದಲ್ಲ ಕವಿಯನೊಮ್ಮೆ
ಎಂದು ಪ್ರತಿ ಉಸುರಿನಲಿ ಅಳಲ ಚೀತ್ಕಾರದಲಿ
ಎದೆಗೆಟ್ಟು ಕೂಗದಿರಿ—ಬರುವೆನೊಮ್ಮೆ.

೭

ಹಗಲಿರಲಿ ಇರುಳಿರಲಿ ಯಾವ ದಿನವೇ ಇರಲಿ
ತೇಲಿ ಬರುವೆನು ಮುಗಿಲ ತೇರನೇರಿ;
ಸುಳಿಗಾಳಿಯೊಡಗೂಡಿ ಸುತ್ತು ಸೌರಭ ಸೂಸಿ
ಬರುವೆ ಬೀದಿಯ ತುಂಬ ಬೆಳಕ ಬೀರಿ!

# ಢಣ್....ಢಣಾ....ಢಣ್....     *     *     *

೧

ಢಣ್....ಢಣಾ....ಢಣ್....
ಗಡಿಯಾರವಲಿ ಗಂಟೆ ಹೊಡೆಯುತಿದೆ ಎಂಟು
ನನಗು ಅದಕೂ ಇಹುದು ನಿತ್ಯಗಂಟು;
ದೇಹದಲಿ ಆಲಸಿಕೆ
ಮನಸಿನಲಿ ಬೇಸರಿಕೆ
ಕಣ್ಣಿನಲಿ ತೂಗುತಿದೆ ಇನ್ನೂನು ತೂಕಡಿಕೆ
ಏಳಲಾರದ ಮನಸು
ಹಾಸಿಗೆಯ ಬಿಟ್ಟು—
ಪಾಪ ! ನೆರೆಮನೆಯುಲಳುತಿದೆ ಕೂಸು
ಕಿಟಿಕಿಟಿಯು ಕೊಟ್ಟು— !

೨

ಎದ್ದು ಹಾಸಿಗೆ ಮಡಿಸಿ
ಕಸಗುಡಿಸಿ
ಕನ್ನಡಿಗೆ ಎದುರಾಗಿ ನಿಂತು ತಲೆಗೂದಲಲಿ
ಬೆರಳಿರಿಸಿ—
ನನ್ನ ನಾನೇ ಕಂಡು
ಹೂ ನಗೆಯ ಸವಿಯುಂಡು—ಅಂತೆ ನಿಂತೆ
ಎದೆಯ ಆಗನದಲ್ಲಿ
ಮುಗಿಲು ಮುಗಿಲಿಗೆ ತಾಕಿ ಗಗನವೇ ಹರಿವಂತೆ
ಹೊಳೆಯಿತದೊ ಕೋಲ್-ಮಿಂಚು !
ಇದ್ದುದಿರುವಂತೆಯೇ—
ನಿಂತ ನೆಲ, ಮೇಜು ಕುರ್ಚಿ ಟಿಪಾಯಿ ಸೆಲ್ಫು
ಅಟ್ಟಹಾಸದ ಕುಣಿತ !
ಮೈ ಕೈಯ ಮಣಿತ.

೩

ಕತ್ತಲೆಯ ಕೋಣೆಯಲಿ
ಮೂಕನಾಗಿಯೆ ಯಾರೊ ಮೇಲ್ಹಾಯ್ದು ಬಿದ್ದಂತೆ
ಬಿಡಿಸಿಕೊಳ್ಳುವ ಮುನ್ನ ಯಾರಿಲ್ಲವೆಂಬಂತೆ
ಮನಕೆ ಕವಿಯಿತು ಮಂಕು
ಅಣಕು ಮಿಣುಕು.
ಹೊರಳಿ ನೋಡಿದೆ ಮತ್ತೆ ಕೋಣೆತುಂಬ
ಹರಿದು ಹೋಯಿತು ಸುತ್ತು ಕಣ್ಣ ಬಿಂಬ
ಹ್ಯಾಂಗರಿಗೆ ತೂಗುತಿವೆ ಕೋಟು ಪ್ಯಾಂಟು
ಇತ್ತ ಒಂದೆರಡು ಶರ್ಟು
ಮೇಜು ಶೆಲ್ಫು ಕಪಾಟಿನಲಿ ಪುಸ್ತಕದ ರಾಶಿ
ಸೌಭಾಗ್ಯದಾ ನನ್ನ ಜೀವಕಾಶಿ
ಸರ್ವಸ್ವಕೂ ನನಗೆ ಇದುವೆ ಆಸ್ತಿ
ಮತ್ತೆ ತಲೆಯೊಳಿದೆ ಈ—ಇದಕು ಜಾಸ್ತಿ.
ಏಸಿದೆ ಈ ಹೃದಯ ಸಮ
ಉಳಿದೆಲ್ಲವು ಬಿಸಿಲ ಹಿಮ

೪

ಕರೆಯುತಿದೆ ಕರ್ತವ್ಯ ಕೈಯ ಬೀಸಿ
ಉಸಿರು ಉಸುರಿಗು ತನ್ನ ನೆನಪು ಸೂಸಿ
ದಾರಿಯುದ್ದಕು–ಬರಿಯ ಧೂಳಿ ಧೂಳು
ಬಸ್ಸು ಬಂದರೆ ಬಟ್ಟೆ—ಎಲ್ಲ ಹಾಳು !

೫

ಠಣ್....ಠಣಾ....ಠಣ್....
ಸಿಪಾಯಿ ಹೊಡೆದನೊ ಗಂಟೆ
ನಿತ್ಯದಂತೆ

ಇದೆ ನೋಡು ಹಾಯ್-ಸ್ಕೂಲು
ನಾ ಮೇಸ್ಟ್ರು.
ತಾಸು ತಾಸಿಗು ಗಂಟೆ ಹೊಡೆವರಂತೆ
ಆದಕಾದರೂನು ಬಿಡುವಿಲ್ಲವಂತೆ!
ಉಳಿದವರ ಜೊತೆಗೂಡಿ
ಗಾಣದೆತ್ತಿನ ಜೋಡಿ
ಕ್ಲಾಸು ಕ್ಲಾಸಿಗು ಸುತ್ತಿ ಹೋಗಬೇಕು
ಆ ವಿಷಯ ಈ ವಿಷಯ ಯಾವುದಾದರು ಏನು?
ಬರುತಿರಲಿ ಬರದಿರಲಿ ಕಲಿಸಬೇಕು.
ಕಲಿಸದಿದ್ದರೆ ಹೇಗೆ ಸಾಗಬೇಕು!

೬

ತಲೆ ಹಾರಿ ಹೋದಂತೆ ಜೀವ ಮೌನ
ಸೋತ ನರನಾಡಿಗಳು ನಿಜಕು ಊನ
ಸ್ಟಾಫ್-ರೂಮಿನಲಿ ಕಪ್ಪು ಬಸಿಯ ಗಾನ
ಹೀರುವರು ಮೇಸ್ಟ್ರುಗಳು ಚಹದ ಜೇನ!
ಗಾಳಿಯಲೆಯಲೆಯಲ್ಲಿ ಸಿಗರೇಟ ಧೂಮ
ಅವರಿವರ ನೇಮ!
ಅಲ್ಲಲ್ಲಿ ಕುಳಿತಲ್ಲಿ
ಮೂಲೆ ಮೂಲೆಗಳಲ್ಲಿ
ಕೊರೆದ ಕಡ್ಡಿಗಳೊಡನೆ ಸಿಗರೇಟ ತುಂಡುಗಳು
ಸುಟ್ಟ ಮೋರೆಯ ತೋರಿ ಬಿದ್ದಿರುವವು;
ತಂಬಾಕು ತಿಂದವರ ಕೆಂಜೊಲ್ಲ ಪಿಚಕಾರಿ
ನೊಣಕೆ ಔತಣವನ್ನು ನೀಡಿರುವವು!

೭

ಇರುವ ಶಕ್ತಿಯನೆಲ್ಲ ಹಿಡಿದು ನಿಲಿಸು
ಹುಡುಗರೊಡಗೂಡುತಲಿ ಮತ್ತೆ ಬೆರೆಸು

“ ತಿನಬೇಕು ಹಾಕಿದಷ್ಟು
ಹೊರಬೇಕು ಹೇರಿದಷ್ಟು ”
ಎನ್ನುವದೆ ಈ ಬಾಳ ಜಾಳಾದ ನೀತಿ
ಹೊಲಸು ಪಿಶಾಚಿ.

..........................................

ಸಿಪಾಯಿ ಹೊಡೆದನೊ ಸಿಂತು ಕೊನೆಯ ಗಂಟೆ
ದೇವರಂತೆ !
ಢಣ್....ಢಣಾ....ಢಣ್....

## ಹೊಸ ಬಾಳಿನ ಹೊಸತಿಲಲ್ಲಿ . * *

೧

ಹೊಸ ಬಾಳಿನ ಹೊಸತಿಲಿನಲಿ
ಝಗ ಝಗಿಸುವ ಬೆಳಕು
ನಿಶೆ ಸರಿದಳೆ ಉಷೆ ಸುರಿದಳೆ
ಒಳ ಹೊರಗೂ ಹೊಳಪು

೨

ಅರಿಷಿಣದೊಳು ಮಿಂದಾಯಿತೆ
ಬಂದಾಯಿತೆ ಜೊತೆಗೆ
ನೆರಳಿನ ಸರಿ ನಿಂದಾಯಿತೆ
ಶುಭಕೋರುತ ಪತಿಗೆ.

೩

ಹಸನಾಯಿತೆ ಹೊಸದಾಯಿತೆ
ಮನೆಯಂಗಳ ಚೆಲುವು
ತಿಳಿ ನೀರಿನ ತಳಿಯಾಯಿತೆ
ರಂಗೋಲಿಯ ರೂಹು.

೪

ಬಾಗಿಲಿನಲಿ ಮಾಂದಳಿರಿನ
ತಿಳಿ ಹಸುರಿನ ನೆರಳು
ಶ್ರೀಗಂಧದ ಸೌಭಾಗ್ಯದ
ಸಿರಿ ಕುಂಕುಮ ಬೆರಳು.

೫

ಜೋಲ್-ಮುಡಿಯಲಿ ಪೂಸರವಿದೆ
ಸಿಂಗಾರದ ಗೌರಿ
ಎದೆ ಎದೆಗೂ ಸುಖ ನೀಡಿವೆ
ಕಣ್-ಮನವೂ ಸೇರಿ.

೬

ಗಲ್ಲದೊಳೂ ಹೂವರಳಿದೆ
ಸೌರಭವನು ಸೂಸಿ
ಕಣ್ಣಿನೊಳೂ ಕೋಲ್-ಮಿಂಚಿದೆ
ಎದೆಯಾಶೆಯ ಬಯಸಿ

೭

ಮನದುಂಬಿಯ ಝೇಂಕಾರದ
ಓಂಕಾರಕೆ ಹೂವು
ಕಣ್ಣರಳಿಸಿ ಎದೆಯಲುಗಿಸಿ
ಮುಂಚಾಚಿದೆ ಬಾಹು.

೮

ಇಂದ್ರಾಣಿಯ ಚೆಲ್ವಿಕೆಯೂ
ಮೈ ತಳೆದರು ಕೂಡ
ಮನಮೋಹಿನಿ ಮಾಯಾವಿನಿ
ರಮಿಸಿದರೂ ಬೇಡ.

೯

ಶ್ರೀಚಂದ್ರನ ರೋಹಿಣಿಯೊಲು
ಎದೆಗಿಳಿಯಿತು ಪ್ರೀತಿ
ಹಾಲ್-ಜೇನಿನ ಹೊಳೆ ಹರಿಯಿತು
ಎರಡಂಚೂ ಸೂಸಿ.

೧೦

ಬೆಳುದಿಂಗಳ ಮಳೆಯಾಯಿತು
ಸುಖವಾಗಲಿ ಬದುಕು
ಮಕರಂದವೊ ಮಲ್ಲಿಗೆಯೊ
ಮನೆ ತುಂಬಿತು ಬೆಳಕು.

೧—೭—೫೩. * * *

೧

ಮಳೆ ಬಂತು ಹೊಳೆ ಬಂತು
ಬಿಸಿಲ ತಾಪದಿ ಬೆಂದು—
ನೊಂದ ನೆಲಕೂ ಇಂದು ಜೀವ ಬಂತು
ಮನೆ ಮುಂದೆ ಹೊಸತಿಲಲಿ
ಪ್ರಭೆಯ ಪ್ರತಿಭಾ ಕಿರಣ
ಮನೆಯನೆಲ್ಲವನಿಂದು ಬೆಳಗ ಬಂತು.

೨

ಎದೆಯ ಹೂದೋಟದಲಿ ಬಳ್ಳಿ ಹಂದರದಲ್ಲಿ
ಮೊಗ್ಗೆ ಮೊಗದೋರಿಹವು ಕಣ್ಣ ತೆರೆದು
ಕೋಮಲತೆ ಮೈತಳೆಯಿತೆಂಬ ಭಾವನೆಯಲ್ಲಿ
ಮೆಲ್ಲ ಮೆಲ್ಲನೆ ಕೈಯ ಚಾಚಿ ಸರಿದು.

೩

ಉಸಿರು ಉಸುರಿನ ಕೂಡ ಪ್ರೀತಿಯಮೃತ ಸುರಿಸಿ
ಮೌನದಲಿ ಮೃದುವಾಗಿ ಪಕಳೆ ಬಿಡಿಸಿ
ಭೂಮಿ ತಾಯಿಯ ಬಸಿರ ಬಯಕೆ ಉಸಿರಾದಂತೆ
ಕಣ್ಣನರಳಿಸಿ ನೋಡಿ ಎದೆಗೆ ಸರಿಸಿ.

೪

ಮನ ವಿಮಾನವನೇರಿ ದಿಗ್ದಿಗಂತಕು ಹಾರಿ
ಬಣ್ಣ ಬಣ್ಣದ ಸ್ವರ್ಣಲೋಕ ಸೇರಿ;
ರಂಭೆ ರೋಹಿಣಿ ರತಿಯ ಇಂದ್ರ ಚಂದ್ರರ ಕತೆಯ
ಕನಸು ನೆನಸಿಗೆ ದಾರಿ ಛಾಯೆ ಬೀರಿ.

೫

ಕಡಲಿನಾಚೆಗೆ ಕಡಲು ಮುತ್ತು ರತ್ನಗಳೊಡಲು
ಸುಖದ ಸಂಭ್ರಮ ತುಂಬಿದಂಥ ಮಡಿಲು;
ಮೀನಗಾರನ ಹೆಣ್ಣು ಬಲೆಯ ಬೀಸಿದ ಕಣ್ಣು
ಕೊರಳನಪ್ಪಿದ ತೋಳು—ಹೆರಳು ಸಡಿಲು.

೬

ಹೆರಳ ಮಾಲೆಗೆ ಸುರುಳಿ ಸಂಪಿಗೆಯ ಸೌಗಂಧ
ತುಂಬಿ ನಿಂತಿಹ ಎದೆಗೆ ಎದೆಯ ಜೇನು;
ಭೂಮಿ ಹಸುರಾಗಿಹುದು ಮರ ಚಿಗಿತು ನಿಂತಿಹುದು
ಸುಗ್ಗಿ ಬರೆ ಹಿಗ್ಗಿನಲಿ ಹಾಡದೇನು?

# ಹೊತ್ತು ಮುಳುಗಿದ ನಂತರ....        *        *

೧

ಹೊತ್ತು ಮುಳುಗಿತು ಕತ್ತಲಾಯಿತು
ಚಿತ್ತ ಬಾಗಿಲಿಗೋಡಿತು;
ಒಂದೆ ದಿನದಲಿ ಬರುವೆನೆಂದರು
ಮೂರು ದಿನ ಕಳೆದಾಯಿತು
ಎದೆಯ ಹಂಬಲ ತುಂಬಿ ನಿಂತಿದೆ
ನಿಮಿಷ ನಿಮಿಷವನೆಣಿಸಿದೆ
ಕರುಳು ಕರುಳಿಗು ಶಾಂತಿ ಹೇಳಿದೆ
ಜೀವ ಕಳವಳಗೊಂಡಿದೆ
ಅವರ ಪ್ರೀತಿಯ ಹೂವು ಹೆರಳಲಿ
ಮಧುರ ಸೌರಭ ಸೂಸಿದೆ
ಇಂದು ಬರದಿರೆ ತಾನು ಕೂಡಾ
ಬಾಡಿ ಹೋಗುವೆನೆಂದಿದೆ.

೨

ಮೊದಲ ಇರುಳಲಿ ಬೆರಳು ಬೆರಳಲಿ
ಕೊರಳು ಕೊರಳಲಿ ಸೇರಿಸಿ
ಕುರುಳು ಹೊರಳಿಸಿ ತೋಳ ತಳುಕಿಸಿ
ದೇಹ ದೇಹದಿ ಕರಗಿಸಿ
ಜೀವ ಕಣ ಕಣದಲ್ಲಿ ಸ್ವರ್ಗದ
ಸುಖದ ಹೊಳೆಯನು ಹರಿಯಿಸಿ
ಹಾಲು ಹಣ್ಣಿನ ಹೂವು ಜೇನಿನ
ಸಾಮರಸ್ಯದಿ ಬೆರೆಯಿಸಿ
ನನ್ನ ಬಾಳಿನ ಪೂರ್ಣ ಚಂದ್ರಮ
ಬೆಳಗಿ ಬಂದಿಹ ಸಂಭ್ರಮ

ಬೇಡಿ ಬಯಸಿದ ಬಯಕೆ ಕೂಡಿತು
ಹರಿದು ಹೋಯಿತು ವಿಭ್ರಮ.

೩

ಬೆಳಕು ಬೆಳಕಿಗೆ ಮುತ್ತು ನೀಡಿತು
ಜೀವ ಹೊಸ ಹೊಸದಾಯಿತು
ಹೊಳೆವ ಲೀಲಾಲೋಲ ಕಣ್ಣಲಿ
ನನ್ನ ಮುಖವೂ ಅರಳಿತು.

೪

ಮಾತು ಮಾತಿಗೆ ಎನಿತು ಹೋಲಿಕೆ
ಕಡಲ ಒಡಲಿನ ರತ್ನಕೆ
ಸಂಜೆ ಸಮಯದಿ ಇಣಿಕಿ ಮಿಣುಕುವ
ಮುಗಿಲಿನಕ್ಷಿಗೆ—ಚಿಕ್ಕೆಗೆ.
ಗಂಗೆ ಗೌರಿಯೊ ತುಂಗ ಭದ್ರೆಯೊ
ಸರ್ವಮಂಗಳೆ ಪೂರ್ಣಿಮಾ;
ಮೂಡಣದ ಉಷೆ ಬಂದು ಕುಣಿವಳೊ
ಕಾವ್ಯ ಕನ್ನಿಕೆ ಕಲ್ಪನಾ.

೫

ಅಂದಿಗೂ ಮೊದಲಾಗಿ ಇಂದಿಗು
ಏಸು ದಿನಗಳ ನೆನೆಯಲಿ
ಕನಸಿನಲಿ ಕಂಡಂತೆ ಆಗಿದೆ
ಬಂದು ರಕ್ಷೆಯ ನೀಡಲಿ
ತಂಗಿ ಇಂದಿರೆ ತಮ್ಮ ಮೋಹನ
ಮರೆತು ನಿಂದಿರೆ ಮರೆಯಲಿ
ಹೊಸತಿಲದ ಬಳಿ ಬಂದು ನಿಲ್ಲಲೆ
ಬರುವ ದಾರಿಯ ಕಾಯಲೆ ?

೬

ಇರುಳು ಮರಳಿತು ಮತ್ತೆ ಹೊರಳಿತು
ಆದರೂನೂ ವಿಫಲವೆ !
ಹಗಲು ಬಂದಿತು ಮತ್ತೆ ಸಂದಿತು
ಬಾರದಿರುವರೆ ದೈವವೆ !
ಹತ್ತು ಹೊಡೆಯಿತು ಚಿತ್ತ ಕದಡಿತು
ಯಾವ ಆಶೆಯ ಹಿಡಿಯಲಿ
ಸ್ವರ್ಗವೂ ಹಾಳಾಗಿ ಹೋಗಲಿ
ಬಂದು ಎದುರಿಗೆ ನಿಲ್ಲಲಿ !

# ಎದೆಯ ಕರೆ * * *

೧

ಧೋ....ಧೋ....ಧೋ....
ಮಳೆ ಸುರಿದಿದೆ ಇಳೆಗಿಳಿದಿದೆ
ಮುಗಿಲೆಲ್ಲವು ಕರಗಿದೆ.
ನಾಡು ಕಾಡು ನೀರಾಗಿದೆ
ದಾರಿ ಕಾಣದಾಗಿದೆ ;
ಜಗದ ನಗುವು ನೋವು ನಲಿವು
ಇದರ ನಾದಲೀಲೆಯಲ್ಲಿ ಏಕತಾನವಾಗಿದೆ
ಗಾಳಿ ಶೃತಿಯ ಹಿಡಿದಿದೆ.

೨

ಹಳೆಯ ಕೊಳೆತ ಕಡ್ಡಿ ಕಸವು
ನಿಂತ ನೀರು ಕೊಳಚೆ—ವಿಷವು
ಕೊಚ್ಚಿಕೊಂಡು ಹೋಗಿವೆ
ಹರಿವ ನೀರ ಸುಳಿಗ ಸಿಕ್ಕು ಎಲ್ಲೊ ಮಾಯವಾಗಿವೆ;

೩

ಮಳೆಯ ಘೋರ ಸೆಳಕುಗಳಿಗು
ಗಾಳಿ ಹೊಡೆತ ಬಡೆತಗಳಿಗು
ನಿನ್ನ ಗುಡಿಸಲಪರಿ ಮುದುರಿ
ನೆಲವನಪ್ಪಿ ಬೀಳದಿರಲಿ
ನೊಂದ ಜೀವ ಬದುಕಲೆಂದು ನಿರ್ಧಾರವ ಮಾಡಲಿ
ಆಶೆ ಹೊತ್ತು ನಿಲ್ಲಲಿ !

೪

ಆಪರೂಪು ಕರೆಪೆಯೇನು
ಮಹಾಪೂರ ಬಂದಿತೇನು
ಇಮೋ ಈಗ ಹಾಯಿ ಹಾಕಿ ತೆಪ್ಪ ತೇಲಿ ಬಿಡುವೆನು
ತೇಲಿ ತೇಲಿ ಬರುವೆನು.

೫

ಬಾಗಿಲನ್ನು ತೆರೆದು ಬಿಡು
ಮನದ ಜಗುಲಿಯಲ್ಲಿ ಮಿಣುಕು–
ದೀಪವನ್ನು ಹಚ್ಚಿ ಇಡು
ಎದುರು ಬದುರು ಬಂದು ನಿಂದು
ಎದೆಗೆ ಎದೆಯು ಕೂಡಿದಂದು
ಮೂಕ ಮಾತಿನಿಂದ ಹೃದಯ ಪ್ರೀತಿಗೀತ ಹಾಡಲಿ
ಶೋಕಗೀತ ಮರೆಯಲಿ.

## ಸೂಳೆ * * *

೧

ಥೂ....ಸೂಳೆ, ಹೇಸಿ ಪಾಪದ ಹೆಣ್ಣು
ಇವಳ ಬಾಳೇಸಿಹುದು ಹಾಳು ಮಣ್ಣು
ಊರ ಕೇರಿಯ ಹೊಲಸು ಕೊಳಚೆಯಿಹ ಬೀದಿಯಲಿ
ವೇಷದಂಗಡಿಯಿಟ್ಟು ಯಜಮಾನಿಕೆ
ಗರತಿಯರ ಎದುರಿನಲಿ ಎದೆಗಾರಿಕೆ
ಎಂದು ಜನ ಕಂಡಂತೆ, ರಾಮ ಸೀತೆಯರಂತೆ
ಬಾಳಿ ಬದುಕುವ ತೆರದಿ ನುಡಿವ ಸೊಲ್ಲು
ತೆರೆದ ಹಲ್ಲು.... !

೨

ಅವರಿವರ ಸಂಸ್ಕೃತಿಗೆ ಮತ್ತೆ ನಾಗರಿಕತೆಗೆ
ಇವಳ ಕಥೆ ಸರಿಯಾಗಿ ಸಾಗಬೇಕು ;
ಇವಳಿಲ್ಲದೀ ಜಗದ ಬಾಳ ಗೋಳಿನ ಕಥೆಗೆ
ಯಾರು ಮುನ್ನುಡಿಯನ್ನು ಬರೆಯಬೇಕು ?

೩

ಹರಿನಾಮದ ಆಚಾರ್ಯರು
ಹಣೆಯ ತುಂಬ ವಿಭೂತಿಯ ಪಟ್ಟೆ ಹೊತ್ತ ಶರಣರು
ಮೂರು ಹೊತ್ತು ನೀರ ಮುಳುಗಿ ಮಂತ್ರ ತಂತ್ರ ಭಟ್ಟರು
ಹೊಟ್ಟೆ ಹೊತ್ತ ಶೆಟ್ಟರು
ಕತ್ತಲಲ್ಲಿ ಕದ್ದು ಬಂದು ಇವಳ ಗುಡಿಯ ಭಕ್ತರು
ನೀತಿಯಿಂದ ಮುಕ್ತರು.

ಆದರೂನು ಇರುಳು ಕಳೆದು ಹಗಲು ಬರಲು ಮಾನ್ಯರು
ಮಹಾ ಶೀಲವಂತರು !
ಇವಳೋರ್ವಳೆ ಸೂಳೆಯೆಂದು
ಹೊಲಸು ಹೇಸಿ ಪಾಪಿಯೆಂದು
ಇವಳಿಂದಲೆ ಈ ಸಮಾಜ
ಅಧೋಗತಿಗೆ ಇಳಿಯಿತೆಂದು ವಿಷವ ಕಾರಿ ನುಡಿವರು
ಪಿಸಿ....ಪಿಸಿ....ಪಿಸಿ....ನಗುವರು.

೪

ವಿಧವೆಯ ಬಾಳ್-ಹಾಳಾಗಿದೆ ಮರಳಿ ಮದುವೆಯಾಗದ
ಹೇಗಾದರು ದಾಟಬೇಕು ಕಾಮುಕಡಲ ದೈವವೆ
ಕಣ್ಣೀರಿನ ಆಸರೆ !
ಯಾರೊ ಕೊಟ್ಟ ಶಾಪದಲ್ಲಿ
ದೇಹದುರಿಯ ತಾಪದಲ್ಲಿ
ಹಾಗು ಹೀಗು " ಹೀಗಾಯಿತು " ಅಯ್ಯೋ ಕಾಲು ಜಾರಿತು
ದೇಹ ನೀರಿಗುರುಳಿತು !

೫

ಮದುವೆಯಾಗಲಿಲ್ಲವೆಂದು ಸ್ಕೂಲಿನಲ್ಲಿ ಶಿಕ್ಷಕಿ
ಸೆರಗ ಸರಸಿ ಕಣ್ಣ ಬಲೆಯ ಬೀಸಿ ಬರುವ ನರ್ತಕಿ
ಹಾಸ್ಪಿಟಲ್ಲು ನರ್ಸಾಯಿತು ಬಿಳಿಯುಡಿಗೆಯ ಚಾಕರಿ
ಅಡುಗೆ ಮನೆಗೆ ಶರಣು ಹೊಡೆದು ಆಫೀಸಿನ ನೌಕರಿ
ಕಾಲೇಜಿನ ಕಥೆಯಾಯಿತು
ದೇಹ ಬೆಳೆದು ಬಂದಿತು !
ದೈವ ಕೃಪೆಯದೆಂತೊ ಏನೊ ಭ್ರೂಣಹತ್ಯವಾಯಿತು
ಬಾವಿ ಕೆರೆಯ ಪಾಲಾಯಿತು ಆಯುಷ್ಯವೆ ತೀರಿತು !

೬

ಮಡಿವಂತರ ಮೂಲೋಕದಿ ಇದೊ ಇದೂ ನ್ಯಾಯ ನೀತಿ
ಶೀಲಕೆ ಪಂಚಾರತಿ !
ಮನೆ ಮನೆಯಲಿ ತೆರೆಯ ಮರೆಗೆ ಎಂಥದಯ್ಯೋ ನಾಟಕ
ರಾಮಾಯಣ ಭಾರತ !
ನಿನ್ನ ಮುಖದಿ ಏನಿಹುದೋ ಈಗಾದರು ನೋಡಿ ನಗು
ಹೊಲಸು ಕಪ್ಪು ಕಲೆಯನೆಲ್ಲ ಬೇಗ ಬೇಗ ಅಳಿಸಿಬಿಡು
ನಂತರ....
ಸೂಳೆ ಕಥೆಯ ಕೇಳಿ ಒಮ್ಮೆ ನೀನೂನು ಅತ್ತುಬಿಡು.

# ದೀಪದಾನ * * *

ಜೊತೆಯಿರದ ಈ ಬಾಳ ಹಾಳು ಗೋಳಿನ ಕಥೆಯ
ದಾರಿ ಕೊರಕಲುಗಳಲಿ ನಾಗುತಿರಲು ;
ಹಗಲಿರುಳು ಉರುಳಿದರು ಹೊಸತನವೆ ಬರದಿರಲು
ಏನೊ ಎಂತೋ ಜೀವ ನರಳುತಿರಲು.

ನೂರಾರು ಹರದಾರಿ ತಿರುತಿರುಗಿ ಅತಿಥಿಯೊಲು
ನಿನ್ನ ಮನೆ ಹೊಸತಿಲಲಿ ಬಂದು ನಿಲಲು;
ತಂಗಾಳಿ ಸೋಕಿದರೆ ಹಾರುತಿಹ ಮಳೆ ಮೋಡ
ಕರಗಿ ನೀರಾದಂತೆ ಎದೆಯ ಅಳಲು.

ಕರುಳ ತಂತಿಗೆ ಬೆರಳು ನಸುವೆ ತಾಕಿದರೂನು
ಮನಸಿನೊಳಮರೆಯಲ್ಲಿ ಏನೊ ತಾನ ;
ನೂರು ನೋವನು ಮರೆಸಿ ಕೈಚಾಚಿ ನೀಡಿದೆಯ
ಕತ್ತಲಿಹ ಎನ್ನೆದೆಗೆ ದೀಪದಾನ.

# ಮಧುವನದ ಮಂದಾರ * *

ಮಧುವನದ ಮಂದಾರ ಸೌಗಂಧ ಶ್ರೀಪೂರ
ಇಳಿಸಿದೆಯ ನನ್ನೆದೆಯ ಮೌನಭಾರ;
ಸುಖದಲ್ಲಿ ಮರೆತಿರಲು ದುಃಖದಲಿ ನಕ್ಕಿರಲು
ಹೊರಳಿ ನೋಡಿದರಿತ್ತ ಚಂದ್ರತಾರಾ.

ಹಗಲುಗನಸಿನ ಚಿತ್ರ ಕುರುಳ ಸುರುಳಿಯ ಪತ್ರ
ಬರೆದು ಮುಗಿಸಿದೆವೇಸೊ ರಾಶಿರಾಶಿ;
ಪ್ರಿತಿಪೂರದ ತೀರ್ಥಯಾತ್ರೆ ಗೈಯುತಿರಲು
ಬೆಳಗಿ ಬಂದಿತು ನನ್ನ ಹೃದಯ ಕಾಶಿ.

ಇರುಳಿನಲಿ ಹೊಸ ಮಳೆಯ ಸೆಳಕೊಂದು ಸುರಿದಿರಲು
ಮುಂಜಾವಿನಲಿ ನಕ್ಕು ನಲಿವ ಹೂವು;
ಪಕಳೆ ಪಕಳೆಯ ಬಿಡಿಸಿ ಮಾಧುರ್ಯ ಹೊರಸೂಸಿ
ತುಂಬಿ ಬದುಕುವ ಜೀವಕಿಲ್ಲ ಸಾವು.

## ನಾಗರಿಕತೆ-ಬೆಳುದಿಂಗಳು * * *

ಇಂದು ಹುಣ್ಣಿಮೆಯಿರುಳು ಚೆಂಗುಲಾಬಿಯ ಅರಳು
ಅಳುವ ಮಗುವಿನ ಮೊಗದಿ ಬಂತು ನಲಿವು;
ಬನ ಬಾನು ಮುಗಿಲಿನಲಿ ಚೆಲ್ಲುವರಿದಿದೆ ಹಿಗ್ಗು
ಚಂದ್ರ ರೋಹಿಣಿ ಚಿಕ್ಕೆ ನಕ್ಕ ನಗುವು.

ಬಾನವರ ಊರಿನಲಿ ಇಂದು ಎಂತಹ ಹಬ್ಬ
ಮನೆಮನೆಯ ಹೊಸತಿಲಲಿ ದೀಪಾವಳಿ ;
ಅವರ ಸುವಿಶಾಲ ಮನ ಅರಳಿ ಬೆಳಗಿಹ ಬೆಳಕು
ನಮ್ಮ ಜಗಕೂ ಹರಿದು ಬಂತು ಹೊರಳಿ.

ಅವರವರ ಪಾಲಿಗಷ್ಟಷ್ಟು ಬರಬಹುದು
ಕೊಲುವ ಕಲೆ ಸಿದ್ಧಿಸಿದೆ ಬಾಂಬು ನೂರು;
ಚಂದ್ರಲೋಕಕು ಹಾರಿ ದಾಳಿಯಿಕ್ಕುವರೇನೊ
ಚಂದ್ರಮಂಡಲ ಒಡೆದು ಚೂರು ಚೂರು.

ಎನಿತು ಜನ ಕವಿ ಬಳಗ ವರ್ಣಿಸಿಹ ಈ ಬೆಳಕು
ಮಾಯವಾಗಲು ಬಹುದು ಇರುವಂತೆಯೆ ;
ಆಗ ಹುಣ್ಣಿಮೆಯಿಲ್ಲ ಜನಕೆ ಹಿಗ್ಗೂ ಇಲ್ಲ
ಜಗದ ಹೃದಯದಿ ಅಂದು ಕಗ್ಗತ್ತಲೆ.

# ಗಂಟೆ ಹತ್ತಾಯಿತು * * *

೧

ಗಡಿಯಾರದಲಿ ಗಂಟೆ ಹತ್ತಾಯಿತು !
ತಲೆ ತುಂಬಿ ನಿಂತಿರುವ ಚಿಂತೆ ಬೆಂತರನೊಡನೆ
ಕೈಯ ಕುಲುಕಿಸಿ ಕಾಲ ಗೆಲುವಾಯಿತು;
ಕುಳಿತಿರುವ ಕೋಣೆಯಲಿ ಕಂದೀಲ ದೀಪವದು
ಕುರುಡು ಕುರುಡಾಗೆನಿತೊ ಉರಿಯುತ್ತಿದೆ.
ಎಣ್ಣೆ ತೀರಿರಬಹುದೊ ಬತ್ತಿ ಕರಿದಾಗಿಹುದೊ
ನೋಡಬೇಕೆಂಬಾಸೆ ಬೆಳೆಯುತ್ತಿದೆ.
ಆದರೂ ಮೈತುಂಬ ಆಲಸ್ಯ ಇಳಿದಿಹುದು
ಕೈಯ ಚಾಚಲು ಮನಸು ಬರದಾಗಿದೆ;
ಪೆನ್ನಿನಲಿ ಮಸಿಯಿದ್ದರೂನೂ ಒಂದಕ್ಷರವು
ಪೂರ್ಣ ಮೂಡದೆ ಬರೆಹ ಮುನ್ನಡೆದಿದೆ.
ಈ ಹಾಳು ಕಂದೀಲು ನಿಬ್ಬು ಕೆಟ್ಟಿಹ ಪೆನ್ನು
ದಿನದಿನದ ಬಾಳಿನಲಿ ಒಂದಾಗಿವೆ ;
ಬಂದ ಬಾಳನ್ನೆನಿತೊ ನೂಕಬೇಕೆನುವಂತೆ
ಭುಜಕೆ ಭುಜವನ್ನಿತ್ತು ನಿಂದಾಗಿವೆ.

೨

ಅಡುಗೆ ಮನೆಯಲಿ ಅವಳು ಹೂಂ....ಅವಳೆ ನನ್ನವಳು
ಹೊಸ ಹೆಂಡತಿ !
ಗುಣುಗಣಿಸಿ ಹಾಡುವಳು ಜಾನಪದ ಕವಯಿತ್ರಿ
ಗೌರಿ-ಗರತಿ.
ಮೆಲ್ಲ ಮೆಲ್ಲನೆ ಅವಳು ಬಂದರೀಗೇನು ಗತಿ
ಈ ಬರೆಹ ಇಷ್ಟಕ್ಕೆ ನಿಲ್ಲಬಹುದು;

ಗಡಿಯಾರ ಟಿಕಟಿಕಿಸಿದಂತೆ ಮನ ಟಿಕುಟುಕಿಸಿ
ಬಂದರೂ ಅವಳೇನು ಮಾಡಬಹುದು ?
ಎಂಬ ನಿರ್ಧಾರದಲಿ ಪೆನ್ನು ಮುಂದೋಡಿತ್ತು
ಯಾರ ಪರವೆಯು ಅದಕೆ ಇಲ್ಲದಾಯ್ತು.

೩

ಆದರೇನೊಂದು ಚಣ ಕಳೆದುದಾಯಿತೊ ಏನೊ
ಬಾಗಿಲಲಿ ಕೈಬಳೆಯ ಮಧುರ ನಾದ !
ರೋಮ ರೋಮಗಳೆಲ್ಲ ಕಿವಿಯಾಗಿ ಕಣ್ಣಾಗಿ
ಅವಳ ಬರುವಿಕೆಯನ್ನು ಪ್ರತಿರೂಪಿಸಿ ;
ರೈಲು ನಿಲ್ದಾಣದಲಿ ಗಾಡಿ ಬರುತಿರುವಾಗ
ಸೂಚನೆಯ ಗಂಟೆಯೊಲು ಥಣ್....ಥಣಣಿಸಿ !

೪

ಹೊರಳಿ ನೋಡಿತು ಮನಸು........
ಮಲಗಿರುವ ನನ್ನವಳಿಗೇನೊ ಕನಸು
ಹುಣ್ಣಿಮೆಯ ಚಂದ್ರನಿಗು ಇಲ್ಲವೀ ಸೌಂದರ್ಯ
ಹಣೆಯ ಕುಂಕುಮ ಚಂದ್ರನಂತೆ ನೋಡು:
ಹೊಳೆವ ನಾರುಡಿಗಣ್ಣು ಮುದ್ದಾದ ಮುಂಗುರುಳು
ಮನವ ಮೋಹಿಸುತಿರುವ ಎದೆಗಳೆರಡು.
ಮಗ್ಗುಲಲಿ ನೀಳಜಡೆ-ಮೈಸೋಂಕಿ ಮೈಮರೆತು
ತಳಕು ಹಾಕಿರುವೆರಡು ಕರಿನಾಗರ ;
ನಿರ್ಧಾರ ಕರಕರಗಿ ಹರಿಯತೊಡಗಿತು ಚಿತ್ತ
ಮಧುವನದ ನಾಡಿನಲಿ ಸ್ನೇಹಪೂರ.

೫

ಕಣ್ಣ ಮಿಟಕಿಸಿ ಕುರುಡು ದೀಪವಾರಿತು ಪಾಪ
ಪೆನ್ನು ಉರುಳಿತು ಹೊರಳಿ ಮೂರು ಸುತ್ತು

ಕಾಗದದ ಮೇಲೆಲ್ಲ ಚಿತ್ರಪಟ್ಟು
ಡೊಂಬರಾಟದ ಗತ್ತು ಅದಕೆ ಗೊತ್ತು !
ಬಾಯ್-ತುಂಬ ಆಕಳಿಸಿ ಕೊನೆಯ ಪ್ರಾರ್ಥನೆ ಸಲಿಸಿ
ದೇಹ ಹಾಸಿಗೆ ಹುಡುಕಿ ಹೊರಳಾಡಿತು ;
ಬಂದಿರುವ ಆಲಸ್ಯ ಗಾಢ ಸಮ್ಮಿಲನದಲಿ
ಕತ್ತಲೆಯ ಮುಸಿಯಲ್ಲಿ ಮರೆಯಾಯಿತು.

# ಅತಿಥಿಗೆ*

*　　　*　　　*

ನೀನೆನ್ನ ಹೊಸತಿಲಿಗೆ ದುಃಖದೋಲು ಬಂದರೂ
　　ನನ್ನ ತೋಳ್-ತಕ್ಕೆಯಲಿ ಪಿಡಿಯುವಾಸೆ;
ನಿನ್ನ ಶ್ರೀಮುಖದಲ್ಲಿ ಇರುಳ ಕುರುಳಿನ ಛಾಯೆ
　　ಇಳಿದರೂ ನಿನ್ನನ್ನು ನೋಡುವಾಸೆ.

ನಿನ್ನ ತೋಳಿನ ಬಲದ ಮರಣ ವಜ್ರಾಘಾತ
　　ಬಂದರೂ ಈ ಬಾಳು ಪ್ರಜ್ವಲಿಸಲಿ;
ಎದೆಯ ಒಳಗೂಡಿನಲಿ ನೋವು ದನಿಗೈದರೂ
　　ನೀನು ನನ್ನವನೆಂದೆ ನುಡಿಯುತಿರಲಿ.

ನನ್ನ ಕಣ್ಣಂಚಿನಲಿ ಹರಿವ ಗಂಗಾ ಯಮುನೆ
　　ಕೆಳಗಿನೆದೆ ನಾಡಿನಲಿ ಸಂಗಮಿಸಲಿ;
ಎನಿತು ಹರಿದರು ಕೂಡ ನಿನಗೆ ಪ್ರಾರ್ಥನೆ ಸಲಿಸಿ
　　ಪಾದ ಪರಿಸರದಲ್ಲಿ ಸುತ್ತುತಿರಲಿ.

---

* ರವೀಂದ್ರರ ‘Crossing’ 24.

# ಗಂಡು-ಹೆಣ್ಣು

*     *     *

ತಿಪ್ಪೆಗುಂಡಿಯ ಬಿಸಿಯ ಬೂದಿಯಲಿ ಮೈಮುದುರಿ
ಮಲಗಿ ಜೋಂಪಿಸುತಿರುವ ಗಂಡು ನಾಯಿ;
ಹಸಿದು ಕುಸಿದಿಹ ಹೊಟ್ಟೆಗೊಂದು ತುಕಡಿಯ ಬಯಸಿ
ಮೆಲ್ಲನೆದ್ದಿತು; ಅಂತೆ ಮೈಯ ಮಣಿಸಿತು ನಿಂತು
ತೆರೆದು ಬಾಯಿ.
ಲಟಪಟನೆ ಕಿವಿಯ ಬಾರಿಸಿ ದೂಳು ಜಾಡಿಸಿತು
ಹೊರಟಿತು ಸಂದಿಯಲಿ ಗತ್ತು ಹಿಡಿದು.
ಮೂಲೆಗಲ್ಲನು ಕಂಡು ಕಾಲನೆತ್ತುವ ಜಾತಿ
ನೂರು ಶತಮಾನಕೂ ಇದುವೆ ನೀತಿ
ಏನು ಕಂಡಿತೊ ಗಂಡು—
ಗುರಿಯಿಟ್ಟ ಗುಂಡು.
ಕಣ್ಣನರಳಿಸಿ ಕಿವಿಯ ನಿಗುರಿಸಿತು
ಬಾಲವಲ್ಲಾಡಿಸಿತು ನೆಲನೊಮ್ಮೆ ಮೂಸಿ ನೋಡಿ
ಕೂಗಿ ಕರೆದಿತು ಜೀವ
ಕುಂಯ್ ಕುಂಯ ರಾಗಮಾಡಿ!
ಎದುರು ಮನೆಯಲಿ ನಿಂತು ಬಾಲವಲ್ಲಾಡಿಸಿತು
ಶ್ರೀಮಂತ ಹೆಣ್ಣು ನಾಯಿ.
ಅದಕಿಲ್ಲ ಇವರಂತೆ ಹೊಟ್ಟೆ ಪಾಡಿನ ಚಿಂತೆ
ಕಟ್ಟಿ ತಿನಿಸಿದ ಜೊಜ್ಜು ಬೆಳೆದ ದೇಹ!
ಮನೆಯ ಹುಡುಗಿಯ ತೊಡೆಯ ಮೇಲೆ ಬೆಳೆಯುವ ಪುಣ್ಯ
ಅಗ್ರಗಣ್ಯ....
ಬ್ರೆಡ್ಡು ಬಿಸ್ಕೀಟು ಸಾಬೂನ ಸ್ನಾನ
ತನ........ನ....ನ್ನ........ತಾನ........ನಾನಽ!

*     *     *     *

ಗಂಡು ನಾಯಿಯ ಹೊಟ್ಟೆ ಹಸಿವೆಯಡಗಿತು ಆಗ
ಮೈಯ ಹಸಿವೆಯ ಮುಂದೆ ಯಾವ ರಾಗ ?
ಹೆಣ್ಣು ಕಾತರಿಸಿತ್ತು ಗಂಡು ಹಿಂದೋಡಿತ್ತು
ಸೃಷ್ಟಿಯೇ ಮೈಮರೆತು ಜೋಂಪಿಸಿತ್ತು.

## ನಾಗರಿಕ ಅವತಾರಿ

* * *

೧

ತಾಯಿ ಹೊರಳಿದಳು ಸರಳಿ ಸುಪ್ತ ಮನಸಿನಲೇನೊ ತುಂಬ ಕನಸು;
ಹಗಲೆಲ್ಲ ದುಡಿದು ದಣಿದಿಹ ದೇಹ–
ಯಾವಾಗ ನೆಲವ ಕಂಡೇನೆಂದು ತೂಗಿ ಮಲಗಿರಬೇಕು.
ಮೈಮುದುರಿ ಮಲಗಿರುವ ಎಲುಬು ಹಂದರ ಗೂಡು
ಮುರಿದು ಬಿದ್ದಿಹ ಹಳೆಯ ಕೊಡೆಯು ಪಾಡು;
ಆದರೂ....ಆದರೂ....
ಬದುಕಬೇಕೆನುವಾಸೆ ಬಹಳ ಹಿರಿದು!
ಮಲಗುವಾಗಲೆ ತಾಯಿ—
ಹಸಿದ ಕೂಸಿಗೆ ಮೊಲೆಯನುಣಿಸಿದಳು
ಚಪ್ಪಡಿಸಿ ತೂಗಿದಳು ತೊಟ್ಟಿಲಲ್ಲಿ ;
ಇಷ್ಟರಲ್ಲಿಯೆ ಎಣ್ಣೆ ತೀರಿ ಆರೇನೆಂದು
ಕಣ್ಣಿನಲ್ಲಿಯೆ ಜೀವ ಹಿಡಿದಿತ್ತು
ಕುರುಡಿ ಚಿಮಣಿಯ ದೀಪ ಜಗುಲಿಯಲ್ಲಿ.

೨

ನೂರು ನೋವಿನ ಸಂತೆ ಜಗದ ಗುಜುಗುಜು ಗುಲ್ಲು
ಇರುಳಿನಲಿ ಮೈಮರೆತು ಮಲಗಿ ಬಿಟ್ಟಿಹವೇನೊ
ಗೂಗೆ ಘೂಕರಿಸಿ ಕೊನೆಯ ಸಲ ಎಚ್ಚರಿಸಿ
ಹಾರಿ ಹೋಯಿತು ದೂರ ಯಾವ ಕಡೆಗೊ.
ಗೋಪುರದ ಗಡಿಯಾರ ನಿಂತು ?....ಹೊಡೆಯಿತು ಗಂಟೆ
ತಾಸು ತಾಸಿತು ವ್ಯರ್ಥ ಸುತ್ತಿ ತಿರುಗುವ ಚಿಂತೆ
ಅಂತೆ ತಿರುಗಿತು ಪಾಪ
ನಾಗರಿಕ ಅವತಾರಿಗಂಜಿದಂತೆ!
ಮೈಲು ಮೈಲುಗಳಾಚೆ ನೂರ್ಕೋಟಿ ನಕ್ಷತ್ರ
ಪಿಳಪಿಳನೆ ನೋಡುತಿವೆ ಕಣ್ಣು ಬಿಟ್ಟು.

## ೩

ತೊಟ್ಟಿಲಲಿ ಕೂಸು — ಕಂದಮ್ಮ !
ಚಟ್ಟನೆ ಚೀರಿ ಜೋರಿಟ್ಟಿತು ;
ಬಳಲಿ ಮಲಗಿದ ತಾಯಿ ಸಿಡಿದೆದ್ದು ನೋಡಿದಳು
ನಾವು — ಬದುಕಿನ ಮೇಲೆ ಹೊರಳಾಡಿತು.
ಹೊಟ್ಟೆಯಲಿ ಕರುಳುರಿದು ಸುಡುವ ಬೆಂಕಿ
ಮೈಯೆಲ್ಲ ಸುಟ್ಟ ಅರಳಂತಾಗಿ
ಆ ತಾಯಿ ಹಲುಬಿದಳು ಬಿಕ್ಕಿ ಬಿಕ್ಕಿ.

* * * *

ದೂರ ಎಲ್ಲಿಯೊ ಪ್ಯಾಸಿಫಿಕದಲ್ಲಿ—
ಜಲಜನಕ ಬಾಂಬು ಹಾರಿ... ಹಾಹಾಕಾರ
ತಾಯ್-ಕರುಳು ಸತ್ತ ಮಗುವನ್ನಪ್ಪಿ ಚೀರುತಿತ್ತು
ಖಾಲಿ ತೊಟ್ಟಿಲು ತಾನೆ ತೂಗುತಿತ್ತು.

# ನಾ ಬದುಕಬೇಕು

* *

೧

ಈ ಬದುಕಿಗೊಂದು ಬೆಲೆಯಿರುವುದು ಮಗು
 ಹಿಡಿ ಮಣ್ಣು ತಿಂದು ನಾ ಬದುಕಬೇಕು ;
ಹುಲ್ಲು ಹೊದೆಸದ ಹಳೆಯ ಚಪ್ಪರದ ಗತಿನೋಡು
 ಈ ದೇಹ ಕುಸಿಬಿದ್ದರೂ ಜೀವ ಹಿಡಿಯಬೇಕು.

೨

ನೂರು ಹೊರೆ ಕೆಲಸವಿದೆ ಮಜಲು ಮಜಲಿನ ಕೆಳಗೆ
 ಮೈಬಾಗಿ ದುಡಿ ಬಿಡದೆ ಮೂರು ಹೊತ್ತು;
ಮುಖವೆತ್ತಿ ನೋಡದಿರು ಮತ್ತೆ ಮೇಲೇಳದಿರು
 ಹಸಿವೆಯಾದರೆ ತಿನ್ನು ನಾಲ್ಕು ತುತ್ತು.

೩

ಸುರಿದ ಹಸಿ ಹಸಿ ಬೆವರು ಎದೆತಿದಿಯ ಬಿಸಿಯುಸಿರು
 ನಾ ಕೊಟ್ಟ ಋಣವಹುದು ಈ ಭೂಮಿಗೆ;
ನೆಲದ ಬಸುರಿಂದೆದ್ದ ಮರದ ಹೂ ಹಣ್ಣುಗಳ
 ಕೊಯ್ದು ಒಯ್ಯಲು ಬಂತೊ, ಶ್ರೀಮಂತಿಕೆ.

೪

ಬದುಕು ಬಾಯಾರಿದರು ಹೌಹಾರಿ ಹೋದರೂ
 ಸೆಲೆಯಿಲ್ಲವೋ ಎದೆಯ ಹಾಳೊರತೆಗೆ;
ಪಾರಿಜಾತದ ಹೂವಿನಂಥ ಕೋಮಲ ಜೀವ
 ಹೊಳಾಡಿತೋ ಒರಟು ಕಾಲ ಕೆಳಗೆ.

೫

ನೆಲ ಬೆಂದು ಬಲ ಬೆಂದು ಜೀವ ಸಣ್ಣಾದಂದು
 ಎತ್ತಿ ಹಿಡಿಯಲುಬೇಕು ಅಷ್ಟ ಕೋಲು;
ಮೈಭಾರ ಮನಭಾರ ಎಳೆದ ಉಸಿರೂ ಭಾರ
 ಮರಣ ಕೂಗಿದ ಮೇಲೆ ಯಾರ ಪಾಲು !

